

ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ
1ST OCT. '50
6



Chandamama, October '50 Photo by B. Ranganadham

" ಓಹೋ ! ಏನು ಹರಿಣಮ್ಮ ? ಊಟ ಆಯ್ತೇ ?"


क्रियासिद्धि सत्वे भवति
VIJAYA PRODUCTIONS

## ದೀಪಾವಳಿಯ ಆಕರ್ಷಣೆ

★

ಮಾಮೂಲಿಗಿಂತ ಹೆಚ್ಚು ಪುಟಗಳು, ಅನೇಕ ಸುಂದರ ರೇಖಾ ಚಿತ್ರ ಮತ್ತು ತ್ರಿವರ್ಣ ಚಿತ್ರಗಳು, ಆಕರ್ಷಕ ಕಥೆಗಳು, ಮನೋಹರ ಪದ್ಯಗಳು, ಮನರಂಜಕ ಸಮಸ್ಯೆಗಳು, ಅಂದವಾದ ರಂಗೋಲಿಗಳು ಇವೆಲ್ಲವುಗಳೊಂದಿಗೆ

↓

### ಹಿಂದಿ ಚಂದಮಾಮ

**ದೀಪಾವಳಿ (ನವಂಬರು) ಸಂಚಿಕೆ**

↑

ಹೊರಬೀಳುತ್ತದೆ. ಇಷ್ಟೆಲ್ಲಾ ತುಂಬಿದ್ದರೂ, ಸಂಚಿಕೆಯ ಬೆಲೆ ಮಾಮೂಲು **6** ಆಣೆಗಳೇ.

★

ಉಪೇಕ್ಷೆಯಿಂದಿದ್ದರೆ ಈ ಉತ್ತಮ ಸಂಚಿಕೆ ದೊರಕದೇ ಹೋಗಬಹುದು. ಆದುದರಿಂದ ನಿಮ್ಮ ಪ್ರತಿಗಳಾಗಿ ಈಗಲೇ ನಿಮ್ಮ ಊರಿನ ಏಜೆಂಟರಿಗೆ ಮುಂದಾಗಿ ಹೇಳಿರಿಸಿರಿ.

**ಚಂದಮಾಮ ಪಬ್ಲಿಕೇಷನ್ಸ್**

P. B. 1686 :: MADRAS - 1

### ಡೋಂಗರೇ ಬಾಲಾಮೃತ

•

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.

### ವಾಚಕರು ಗಮನಿಸಿ

ನವಂಬರು ಡಿಸಂಬರಿನ ಕನ್ನಡ ಚಂದಮಾಮದಲ್ಲಿ ಇನ್ನೂ ಹೆಚ್ಚಿನ ಅನೇಕ ಸಣ್ಣ ಮನರಂಜಕ ಕತೆ ಕವನಗಳನ್ನು ಕೊಡಲಾಗುತ್ತೆ. ಅನೇಕ ಆಕರ್ಷಕ ವಿಷಯಗಳಿರುತ್ತವೆ. ಉಪೇಕ್ಷಿಸಿದರೆ ಪ್ರತಿಗಳು ಸಿಕ್ಕದೇ ಹೋಗಬಹುದು. ಆದುದರಿಂದ ನಿಮ್ಮ ಪ್ರತಿಗಳನ್ನು, ನಿಮ್ಮ ಊರಿನ ಏಜೆಂಟರಿಗೆ ಹೇಳಿ ಮುಂದೆಯೇ ಕಾಯ್ದಿರಿಸಿಕೊಳ್ಳಿ ತಡಮಾಡಿದರೆ ವಿಷಾದ ಪಡಬೇಕಾದೀತು.

— ಚಂದಮಾಮ.

## ಕಂದರಿಗಾಗಿ ಪುಸ್ತಕಗಳು

★

| | | |
|---|---|---|
| ಪೆದ್ದನಪುರಿ | .... | ೦-೨-೦ |
| ಕತ್ತ್ರೆಯುಮೇಳ | .... | ೦-೨-೦ |
| ಕಳೆದ ಕಡಲೆ | .... | ೦-೨-೦ |
| ಗೆಳೆಯ | .... | ೦-೩-೦ |
| ಚಂದಪ್ಪ | .... | ೦-೩-೦ |
| ಜಾಣಗುಬ್ಬಿ | .... | ೦-೩-೦ |
| ಹೊಟ್ಟೇಡುಮ್ಮ | .... | ೦-೩-೦ |
| ನರಿಗಳ ತಂತ್ರ | .... | ೦-೩-೦ |
| ಮಡ್ಡಮ್ಮನ ಸಂಸಾರ | .... | ೦-೩-೦ |
| ರೆಕ್ಕೇನಕ್ರಪ್ಪ | .... | ೦-೩-೦ |
| ಓತಿಕಾಟನ ತಂಗಿ | .... | ೦-೩-೦ |
| ಗಾಳಿಯ ಹಾವಳಿ | .... | ೦-೩-೦ |
| ತಿರುವುಮುರುವು | .... | ೦-೩-೦ |
| ಗುಬ್ಬಚ್ಚಿಗೂಡು | .... | ೦-೩-೦ |
| ಕೆಂಪುಮೋತೀ ಹಂಪಣ್ಣ | .... | ೦-೩-೦ |
| ಮೂವರು ಕಳ್ಳರು | .... | ೦-೩-೦ |
| ಮಂಗ ಎಂದರೆ ಮಂಗ | .... | ೦-೩-೦ |
| ಕನಕಾಂಗಿಯ ವಕೀಲಿ | .... | ೦-೩-೦ |
| ಬಂಗಾರ ಕೂದಲಿನ ರಾಕ್ಷಸ | | ೦-೩-೦ |
| ಚಿಕ್ಕ ಹುಡಿಗಿ ಪುಟ್ಟ ತಮ್ಮ | | ೦-೪-೦ |
| ಕಿಡಿಗೇಡಿ ಕಿಟ್ಟ | .... | ೦-೪-೦ |
| ಸೇರಿಗೆ ಸವ್ವಾಸೇರು | .... | ೦-೩-೦ |
| ಧ್ರುವನ ದೋಸ್ತ | .... | ೦-೨-೦ |
| ಗುಡಗುಡಿಯ ರಹಸ್ಯ | .... | ೦-೪-೦ |
| ಮಕ್ಕಳ ಒಡಪು (ಉತ್ತರಸಹಿತ) | | ೦-೪-೦ |

(ಅಂಚೇ ಮತ್ತು ವಿ. ಪಿ. ವೆಚ್ಚ ಬೇರೆ)

೧ ರೂ. ಕ್ಕೆ ಕಡಮೆ ಆರ್ಡರನ್ನು
ವಿ. ಪಿ. ಮೂಲಕ ಕಳಿಸುವದಿಲ್ಲ

**ಸಮಾಜ ಪುಸ್ತಕಾಲಯ,**

ಸುಭಾಸ್ ಬೀದಿ :: ಧಾರವಾಡ





FOR PLEASANT READING &
PROFITABLE ADVERTISING.

## Chandamama Group

(HINDI, TELUGU, TAMIL & KANNADA)

**EVERY MONTH ADORNS**
**92,500 HOMES**

*and*

*Enchants Ten Times the Number of Readers throughout India*

★

**Group Page Rs. 350**

★

*Enquire:*

**P. O. BOX 1686, MADRAS-1**

# ಚಂದಮಾಮ

★

ವಾರ್ಷಿಕ ಚಂದಾ ರೂ. ೪-೮-೦
ಎರಡು ವರ್ಷ ಚಂದಾ ರೂ. ೮-೦-೦

★

ಚಂದಾ, ಮತ್ತು ಏಜೆನ್ಸಿಗೆ ಸಂಬಂಧಪಟ್ಟ ವಿಚಾರಗಳಿಗೆ ಈ ವಿಳಾಸಕ್ಕೆ ಬರೆಯಿರಿ:

*Circulation Manager:*
**CHANDAMAMA PUBLICATIONS,**
P. B. 1686 MADRAS - 1

★

ಮನಿಯಾರ್ಡರ್ ಕಳಿಸುವವರು, ಹಣಕ್ಕೆ ಸಂಬಂಧಪಟ್ಟ ವಿಚಾರಕ್ಕೆ ಈ ವಿಳಾಸಕ್ಕೆ ವ್ಯವಹರಿಸಿರಿ:

*Manager:*
**CHANDAMAMA PUBLICATIONS,**
*37, Acharappan St., G. T. Madras - 1*

★

ಲೇಖನ ಕಳಿಸಲು, ಅಥವಾ ಇತರ ಸಂಪಾದಕೀಯ ವಿಚಾರಕ್ಕೆ ಈ ವಿಳಾಸಕ್ಕೆ ಬರೆಯಿರಿ:

*Editor: Kannada Chandamama,*
**CHANDAMAMA PUBLICATIONS,**
P. B. 1686 : MADRAS - 1

★

ಸೂಚನೆ:—ನಮ್ಮ ವಿಳಾಸ ಸ್ಪಷ್ಟವಾಗಿ ಇಂಗ್ಲಿಷಿನಲ್ಲಿ ಬರೆದರೆ ಜಾಗ್ರತೆ ತಲಪುತ್ತದೆ.



## ಈ ಸಂಚಿಕೆಯಲ್ಲಿ


| ವಿಷಯಗಳು | ಪುಟ | ವಿಷಯಗಳು | ಪುಟ |
|---|---|---|---|
| ಜನ್ಮಭೂಮಿ | .... 5 | ವಿಷ್ಣು ಮಾಯೆ | .... 29 |
| ವಂದನೆ | .... 6 | ವಿಚಿತ್ರ ಮರ | .... 33 |
| ಬಾಪೂಜಿ ಬಾಲ್ಯ | .... 7 | ಗಣಪತಿ ವಾಹನ | .... 39 |
| ಮೂವರು ಚಿತ್ರಗಾರರು | .... 8 | ಏಕೆ ಗೊತ್ತೆ ? | .... 43 |
| ಮೋಸಕ್ಕೆ ತಕ್ಕ ಫಲ | .... 9 | ಹುಲಿಯೂ ನರಿಯೂ | .... 46 |
| ಅವಳಿಮಕ್ಕಳ ಕಥೆ | .... 13 | ಜಡೆ ಹಾಡು | .... 47 |
| ಮಾತಿಗೆ ಮಾತು | .... 21 | ಇಂದ್ರಜಾಲ | .... 50 |
| ಸಂಧ್ಯಾದೇವಿ | .... 24 | ಗಾದೆಗಳು | .... 54 |


---

ಇವಲ್ಲದೆ ಒಗಟು, ನಗೆ ಹನಿ, ಚುಟಕ, ರಂಗೋಲಿ

ಮುಂತಾದುವುಗಳೆಷ್ಟೋ ಇವೆ.

# ಮುಖಚಿತ್ರ

ಕುವಲಯಪೀಡವೆಂಬ ಮದದಾನೆಯನ್ನು ಸಂಹರಿಸಿದಮೇಲೆ ಕೃಷ್ಣಬಲರಾಮರು ದ್ವಾರವನ್ನು ಹೊಕ್ಕು ವಿನೋದಗಳನ್ನು ನೋಡಲಾರಂಭಿಸಿದರು. ದೂರದಲ್ಲಿ ಕಂಸನು ದರ್ಬಾರಿನಲ್ಲಿ ಕುಳಿತಿದ್ದುದೂ, ಅವನೆದುರಿಗೆ ಮಲ್ಲಯುದ್ಧರಂಗದಲ್ಲಿ ಜಟ್ಟಿಗಳು ಸಜ್ಜಾಗಿ ನಿಂತಿರುವುದೂ ನೋಡಿದರು. ಮುಷ್ಟಿಕಚಾಣೂರಾದಿ ವೀರಮಲ್ಲರ ಯುದ್ಧ ನೋಡಲು ಜನರು ಸುತ್ತಲೂ ಗಿಜಗಿಜನೆ ತುಂಬಿದ್ದರು. ಕೃಷ್ಣಬಲರಾಮರನ್ನು ಕಂಡೊಡನೆ ಜನರಲ್ಲಿ ಆನಂದೋತ್ಸಾಹದ ಕೋಲಾಹಲ ವೆದ್ದಿತು.

ಆ ವೇಳೆಗೆ ಮಲ್ಲರಲ್ಲಿ ಒಬ್ಬ ಮುಖ್ಯನಾದ ಮುಷ್ಟಿಕನೆಂಬುವನು ಕೃಷ್ಣನ ಹತ್ತಿರ ಬಂದು "ಎಲೈ! ಕೃಷ್ಣಾ! ಬಲರಾಮಾ! ನೀವಿಬ್ಬರೂ ನೋಡಲು ಬಾಲಕರಂತಿದ್ದರೂ ಮಹಾಶಕ್ತಿವಂತರೆಂದು ಕೇಳಿದ್ದೇನೆ. ಕುವಲಯಪೀಡವನ್ನು ಕೊಂದಮೇಲೆ ನಿಮ್ಮನ್ನು ಯಾರು ತಾನೇ ವೀರರೆನ್ನುವುದಿಲ್ಲ? ನಿಮ್ಮ ಶಕ್ತಿ ಸಾಮರ್ಥ್ಯ ಎಷ್ಟರಮಟ್ಟಿಗಿದೆ ಎಂಬುದನ್ನು ಸ್ವತಃ ನಮ್ಮ ಕಂಸ ಮಹಾರಾಜನು ನೋಡಿ ಆನಂದಿಸಬೇಕೆಂದಿರುವನು. ಬನ್ನಿ! ನಿಮಗಾಗಿಯೇ ನಾವು ಕಾದಿದ್ದೆವು ನಮ್ಮೊಂದಿಗೆ ಮಲ್ಲಯುದ್ಧ ಮಾಡಿ ಎಲ್ಲರನ್ನೂ ತೃಪ್ತಿಗೊಳಿಸಬೇಕು, ಬನ್ನಿ" ಎಂದು ಬಿಡದೆ ಬಲವಂತದಿಂದ ರಂಗಸ್ಥಳಕ್ಕೆ ಕರೆದುಕೊಂಡು ಹೋದನು.

'ಪಾಪ! ಇಂತಹ ಸುಕುಮಾರರಾದ ಬಾಲಕರಿಗೂ ಆ ಯಮದೂತರಂತಹ ಕೊಬ್ಬಿದ ಜಟ್ಟಿಗಳಿಗೂ ಸಮವೇ? ಇಂತಹ ಅನ್ಯಾಯ ನೋಡಲು ನಾವು ಬಂದೆವೇ? ಛೆ! ಬಾಲಕರನ್ನು ಕೊಲ್ಲಲು ಇದು ದುಷ್ಟ ಕಂಸನ ಏರ್ಪಾಡಿರಬೇಕು' ಎಂದು ಜನರಲ್ಲಿ ಅಸಮಾಧಾನವೆದ್ದಿತು. ಆದರೇನು? ಕಂಸನ ಹೆದರಿಕೆಯಿಂದ ಸುಮ್ಮನಿರಬೇಕಾಯಿತು.

ಬಲರಾಮನೊಡನೆ ಮುಷ್ಟಿಕನೂ ಕೃಷ್ಣನೊಡನೆ ಚಾಣೂರನೆಂಬ ಬಲಾಢ್ಯನೂ ಕೈಕಲೆತು ಹೋರಾಡಲಾರಂಭಿಸಿದರು. ಕಂಸನು ಉತ್ಸುಕತೆಯಿಂದ ನೋಡುತ್ತಿದ್ದನು. ನೆರೆದ ಜನರಿಗೆ ಅನ್ಯಾಯ ಕಂಡು ಮೊದಲು ತಾತ್ಸಾರವಾಗಿದ್ದರೂ, ಒಡನೆಯೇ ಅದು ಕುತೂಹಲವಾಗಿ ಪರಿಣಮಿಸಿತು. ಯಾಕೆಂದರೆ ಕೃಷ್ಣಬಲರಾಮರು ನೋಡಲು ಸಣ್ಣ ಬಾಲಕರಂತೆ ಇದ್ದರೂ ವೀರ್ಯ ಸಾಮರ್ಥ್ಯಗಳಲ್ಲಿ ಅತಿಮಾನುಷರಾಗಿ ಕಂಡರು.

ಬಹಳಕಾಲದವರೆಗೆ ಒಬ್ಬರನ್ನೊಬ್ಬರು ಮುಷ್ಟಿಯಿಂದ ತಿವಿಯುತ್ತಾ ಗುದ್ದುತ್ತಾ, ಎತ್ತಿ ಹಾಕುತ್ತಾ ಪಟ್ಟು ಹಿಡಿಯುತ್ತಾ ರೋಮಾಂಚನ ಹುಟ್ಟುವಂತೆ ಕಾದಾಡಿದರು. ಕೃಷ್ಣಬಲರಾಮರ ಒಂದೊಂದು ಏಟಿಗೂ ಚಾಣೂರಮುಷ್ಟಿಕರು 'ಅಮ್ಮಾ' ಎಂದು ತತ್ತರಿಸುತ್ತಿದ್ದರು

ಇದ್ದಕ್ಕಿದ್ದಂತೆ ಗರುಡನು ಸರ್ಪವನ್ನು ಹಿಡಿಯುವಂತೆ ಕೃಷ್ಣನು ಚಾಣೂರನನ್ನು ಹಠಾತ್ತನೆ ಹಿಡಿದೆತ್ತಿ ಗಿರಗಿರನೆ ತಿರುಗಿಸಿ ನೆಲಕ್ಕೆ ಅಪ್ಪಳಿಸಲು, ಆತನ ದೇಹವು ಜರ್ಝರಿತವಾಗಿ ರಕ್ತ ಕಾರುತ್ತಾ ಸತ್ತುಬಿದ್ದನು. ಅದೇ ರೀತಿ ಮುಷ್ಟಿಕನ ಗತಿಯೂ ಆದುದನ್ನು ಕಂಡು ಕೂಟ, ಶಲ, ತೋಸಲಕರೆಂಬ ಇತರ ಮಲ್ಲರು ಒಮ್ಮೆಲೇ ಇವರಮೇಲೆ ಬಂದು ಬಿದ್ದರು. ಆದರೇನು? ಕ್ಷಣಮಾತ್ರದಲ್ಲಿ ಅವರೂ ಯಮಲೋಕ ಸೇರಿದರು. ಇದನ್ನು ಕಂಡು ಉಳಿದ ಜಟ್ಟಿಗಳು ತಲೆ ತಪ್ಪಿಸಿಕೊಂಡು ಎಲ್ಲೋ ಮರೆಯಾದರು.

ಜನಸಮೂಹದಲ್ಲಿ ಕೃಷ್ಣನ ವಿಜಯ ಘೋಷವೆದ್ದಿತು.

# ಚಂದಮಾಮ

ಮಕ್ಕಳ ಕಥೆಯ ಮಾಸ ಪತ್ರಿಕೆ

## ಜನ್ಮಭೂಮಿ

ಅವಳ ಐಸಿರಿಗೆಲ್ಲು ಮೇಲು ಮಿಗಿಲಿಲ್ಲ ;
ಈ ಸೊಬಗೋ ಬೇರಾವ ನಾಡೊಳಗು ಇಲ್ಲ.
ಮೇಲು ಮೇಲೆಲ್ಲರಿಗು ಔದಾರ್ಯದಲ್ಲಿ ;
ಬಾ ! ನೋಡು ಬಾ ! ನನ್ನ ಜನ್ಮಭೂಮಿಯನು !

ಅವಳ ಮಕ್ಕಳಿಗಿಂತ ಧೀರರಿನ್ನಿಲ್ಲ ;
ಅವಳ ಒಲುಮೆಯ ಚಿಲುಮೆ ಆರುವಂತಿಲ್ಲ.
ಧೀರ ಉದಾತ್ತರೀ ಮಕ್ಕಳಿವರೆಲ್ಲ
ಬಾ! ನೋಡು ಬಾ! ನನ್ನ ಜನ್ಮಭೂಮಿಯನು

ಅಹಿತ ಅಪಕಾರಗಳ ಅರಿಯಳಿವಳೆಂದೂ !
ಸೇಡಿನಲಿ ಸುಖವಿಲ್ಲ ಬಿಟ್ಟು ಬಾಳೆಂದು
ಸುಖಶಾಂತಿ ಸೌಹಾರ್ದ ಬಯಸುತಿಹಳೆಂದೂ
ಬಾ! ನೋಡು ಬಾ! ನನ್ನ ಜನ್ಮಭೂಮಿಯನು !

ಸಹನೆ ಸದ್ಗುಣವವಳ ಕಾಪಾಡುತಿರಲು
ಪ್ರೇಮ ಸೌಹಾರ್ದಗಳೆ ಕೋಟೆಯಾಗಿರಲು
ಯಾವ ವೈರಿಯ ಕಾಟ ಕೇಡ ಬಯಸೀತು !
ಬಾ ! ನೋಡು ಬಾ ! ನನ್ನ ಜನ್ಮಭೂಮಿಯನು.

[ ಕಲಾಕುಮಾರ ]



ಸಂಪುಟ ೫
ಸಂಚಿಕೆ ೪

ಅಕ್ಟೋಬರು
೧೯೫೦

# ವಂದನೆ

ಗಾಂಧೀ ತಾತನೆ ಬಾಗುವೆ ನಿನಗೆ,
ಸತ್ಯ ಅಹಿಂಸೆಯ ಗುರುವರಗೆ.
ಭಾರತ ನಾಡಿಗೆ ಸ್ವತಂತ್ರ ತಂದ
ಬಾಪುಗೆ ವಂದನೆ ಬಾಲಕರಿಂದ.
ನಿದ್ರಿತ ಜನರನು ಎಬ್ಬಿಸಿ, ಒಂದೇ–
ತನವನು ಸಾರುತ, ನಡೆಯುತ ಮುಂದೆ;
ಪ್ರಿಯ ಸ್ವಾತಂತ್ರ್ಯವನೆಳೆದೇ ತಂದೆ
ಭಾರತ ಭೂಮಿಯ ಭಾಗ್ಯದ ತಂದೆ.

['ಸದಾರಾಮ' ಮಂಗಳೂರು]

*   *   *

**ಗಾಂಧಿಯ ಗುಣಗಳ ಹಾಡುವೆವು**
**ಗಾಂಧಿಯ ತೆರದಲಿ ನಡೆಯುವೆವು**
ಸತ್ಯಾಹಿಂಸಾ ವ್ರತಧರಿಸಿ
ಕಷ್ಟಪರಂಪರೆಗಳ ಸಹಿಸಿ
ದೀನರ ಸೇವೆಯ ತಾ ವಹಿಸಿ
ಚರಖದಿ ನೂಲನು ತೆಗೆಯುವೆವು!
ಗಾಂಧಿಯ ಗುಣಗಳ ಹಾಡುವೆವು!!
ಗೀತೆಯ ತತ್ವವ ತಾ ತಿಳಿದು
ಮಾತೆಯ ಬಂಧನ ತೆಗೆದೊಗೆದು
ಹರಿಜನರೇಳಿಗೆಯನು ಬಗೆದು
ದೇಶದ ಹಿತವನು ಬಯಸುವೆವು!
ಗಾಂಧಿಯ ಗುಣಗಳ ಹಾಡುವೆವು!!
ಹಿಂದು ಮುಸಲ್ಮಾನ್ ಒಂದೆಂದು
ಚಂದದ ಬಾಳುವೆ ನಮಗೆಂದು
ಹಿಂದೂದೇಶವು ಮುಂದೆಂದು
ತಿಳಿಯುತ ಕೀರ್ತಿಯ ಗಳಿಸುವೆವು!
ಗಾಂಧಿಯ ಗುಣಗಳ ಹಾಡುವೆವು!!

—ಅಮ್ಮೆಂಬಳ ಅನಂತಯ್ಯ ನಾವಡ

## ಆಟ ಆಡುವ

ಕೈಯ ಕೈಯ ಹಿಡಿದುಕೊಂಡು
ಎಲ್ಲರೊಲವ ಗಳಿಸಿಕೊಂಡು
ಹೊಸತು ಆಟ ಆಡುವ
ಥಕ್ಕಧಿಮ್ಮಿ ಕುಣಿಯುವ

ಹೊಸತು ಹುರುಪಿನಿಂದ ಬನ್ನಿ
ಎಲ್ಲರನ್ನು ಕರೆದು ತನ್ನಿ
ಆಟ ಆಡಿ ಓದುವ
ಓದಿ ಆಟ ಆಡುವ

ಗಾಂಧಿ ದೇವ ಹೇಳಿದಂತೆ
ನಮ್ಮ ದೇಶ ಮೆರೆಯುವಂತೆ
ಹೊಸತು ಆಟ ಆಡುವ
ಆಟ ಆಡಿ ಗೆಲ್ಲುವ.

ನಾಳೆ ನಾವೆ ಆಳಬೇಕು
ನಮ್ಮ ನಾಡು ಮೆರೆಯಬೇಕು
ಎಲ್ಲ ಕೂಡಿ ಬನ್ನಿರಿ
ನಗೆಯ ತೋರಿ ಬನ್ನಿರಿ.

ನಮ್ಮ ಎಲ್ಲ ಕೆಲಸವನ್ನು
ನಾವೆ ಗೈವ ಬುದ್ಧಿಯನ್ನು
ಕಲಿಸುವಾಟ ಆಡುವ
ಹರುಷದಿಂದ ಕುಣಿಯುವ

ತಾಳ ಹಾಕಿ ಕುಣಿದು ಬನ್ನಿ
ಗಾಂಧಿ ದೇವ ಗುರುವು ಎನ್ನಿ
ವೀರರಂತೆ ನಡೆಯುವ
ಜಯದ ಭೇರಿ ಹೊಡೆಯುವ

ಹೆಜ್ಜೆಯೆತ್ತಿ ಮುಂದೆ ಮುಂದೆ
ನಮ್ಮ ವೀರ ಧ್ವಜದ ಮುಂದೆ
ಆಟ ಆಡಿ ಬನ್ನಿರಿ
ಕೂಟ ಕೂಡಿ ಬನ್ನಿರಿ

—ರಾ. ವೆಂ. ವಿಶ್ವಾಮಿತ್ರ

## ★ ಬಾಪೂಜಿಯ ಬಾಲ್ಯ ★ ★ ಕೆಲ ಸವಿ ನೆನಪುಗಳು ★

### ★ ಆಶೀರ್ವಾದ ಫಲ ★

ಚಿಕ್ಕಂದಿನಲ್ಲಿ ಗಾಂಧೀಜಿಯವರು ಒಮ್ಮೆ ಶ್ರವಣಕುಮಾರನ ಕಥೆಯನ್ನು ಓದಿದರು. ಕುರುಡರಾದ ತನ್ನ ತಂದೆ ತಾಯಿಗಳ ಸೇವೆಯನ್ನು ಮಾಡುತ್ತಲಿರುವ ಶ್ರವಣ ಕುಮಾರನ ಒಂದು ಚಿತ್ರವನ್ನು ಕೂಡ ಅವರು ನೋಡಿದರು. ಆ ಚಿತ್ರದಲ್ಲಿ ಅವನು ತಂದೆ ತಾಯಿಗಳನ್ನು ತಕ್ಕಡಿಯಲ್ಲಿ ಹೊತ್ತುಕೊಂಡು ತೀರ್ಥಯಾತ್ರೆ ಮಾಡುತ್ತಿದ್ದನು. ಅಂದಿನಿಂದ ಗಾಂಧಿಯವರು ಶಾಲೆ ಬಿಟ್ಟಕೂಡಲೇ ಮನೆಗೆ ಬಂದು ತನ್ನ ತಾಯಿ ತಂದೆಗಳ ಸೇವೆಯನ್ನು ಮಾಡಲಾರಂಭಿಸಿದರು. ಅವರು ಹೇಳಿದ ಎಲ್ಲಾ ಕೆಲಸಗಳನ್ನೂ ಮಾಡುತ್ತಿದ್ದರು. ತಂದೆ ತಾಯಿಗಳು ತಮ್ಮ ಮಗನ ಸೇವೆಯಿಂದ ತೃಪ್ತರಾಗಿ "ಮಹಾತ್ಮ"ನಾಗೆಂದು ಹರಸಿದರು. ಅವರ ಮಾತಿನಂತೆಯೇ ಗಾಂಧೀಜಿಯವರು ಮಹಾತ್ಮರಾದರು. ಲೋಕಪೂಜ್ಯರಾದರು.

* * * *

ಗಾಂಧೀಜಿಯವರು ಚಿಕ್ಕವರಿರುವಾಗ ಒಮ್ಮೆ "ಸತ್ಯ ಹರಿಶ್ಚಂದ್ರ" ನಾಟಕವನ್ನು ನೋಡಿದರು. ಅಂದಿನಿಂದ ಹರಿಶ್ಚಂದ್ರನಂತೆ ತಾನೂ ಕೂಡ ಸತ್ಯವನ್ನೇ ಹೇಳುವೆನೆಂದು ಪ್ರತಿಜ್ಞೆ ಮಾಡಿಕೊಂಡರು. ಎಂತಹ ಕಠಿನ ಪ್ರಸಂಗದಲ್ಲಾದರೂ ಅವರು ಆಮೇಲೆ ಸುಳ್ಳನ್ನು ಹೇಳಲಿಲ್ಲ. ಆ ಸತ್ಯದ ಬಲದಿಂದಲೇ ಅವರು ಸತ್ಯವೂ ಸ್ಥಿರವೂ ಆದ ಸ್ವಾತಂತ್ರ್ಯವನ್ನು ನಮಗೆ ಸಂಪಾದಿಸಿ ಕೊಟ್ಟರು.

### ★ ರಾಮನಾಮ ಮಹಿಮೆ ★

ರಾಮನಾಮವು ಗಾಂಧೀಜಿಯವರ ಜೀವನ ಮಂತ್ರವಾಗಿದ್ದಿತು. ಚಿಕ್ಕಂದಿನಲ್ಲೇ ಅವರು ರಾಮನಾಮದ ಮಹಿಮೆಯನ್ನು ತಿಳಿದಿದ್ದರು. ಮೊದಲು ಅವರಿಗೆ ಭೂತ ಪ್ರೇತಗಳ ಭಯವು ಜಾಸ್ತಿಯಾಗಿತ್ತು. ರಾತ್ರೆಯ ಸಮಯದಲ್ಲಿ ಮನೆಯ ಜಗಲಿಯಿಂದ ಅಂಗಳಕ್ಕೆ ಇಳಿಯುವುದಕ್ಕೂ ಅವರು ಹೆದರುತ್ತಿದ್ದರು. ಇದನ್ನು ತಿಳಿದು ಅವರ ತಾಯಿಯು ರಾಮನಾಮವನ್ನು ಜಪಿಸುವುದರಿಂದ ಭೂತಗಳು ಓಡಿ ಹೋಗುತ್ತವೆ ಎಂದು ತಿಳುಹಿಸಿದರು. ಅಂದಿನಿಂದ ಗಾಂಧಿಯವರು ರಾಮನಾಮವನ್ನು ಜಪಿಸಲು ಪ್ರಾರಂಭಿಸಿದರು. ಪ್ರತಿನಿತ್ಯವೂ ಬೆಳಗಿನ ಜಾವ ನಾಲ್ಕು ಘಂಟೆಗೆ ಎದ್ದು ಪ್ರಾರ್ಥನೆ ಮಾಡುತ್ತಿದ್ದರು. ರಾಮನಾಮದಲ್ಲಿ ಅವರಿಗೆ ಅಚಲವಾದ ವಿಶ್ವಾಸವಿತ್ತು. ಆ ವಿಶ್ವಾಸದ ಬಲದಿಂದಲೇ ಅವರು ಯಾವ ಕಷ್ಟಕ್ಕೂ ಹೆದರದೆ ಸ್ವರಾಜ್ಯ ಸಂಪಾದನೆಯ ಮಹಾ ಕಾರ್ಯದಲ್ಲಿ ಯಶಸ್ವಿಗಳಾದರು !

—ಅಮ್ಮೆಂಬಳ ಅನಂತಯ್ಯ ನಾವಡ.

## ಮೂವರು ಚಿತ್ರಕಾರರು

ಒಂದೂರಿನಲ್ಲಿ ಮೂವರು ಚಿತ್ರಗಾರರು ಇದ್ದರು. ಮೂವರೂ ಚಿತ್ರಕಲೆಯಲ್ಲಿ ಒಬ್ಬರನ್ನೊಬ್ಬರು ಮೀರಿಸುವಷ್ಟು ಮೇಧಾವಿಗಳು.

ಒಂದುದಿನ ಆ ಊರಿಗೆ ಒಬ್ಬ ದೊಡ್ಡ ನ್ಯಾಯಾಧೀಶನು ಬಂದನು. ಈ ಮೂವರನ್ನೂ ಪರೀಕ್ಷಿಸುವ ಉದ್ದೇಶದಿಂದ ಅವರನ್ನು ಕರೆದು ಒಂದು ವಸ್ತುಚಿತ್ರವನ್ನು ಉತ್ತಮವಾಗಿ ಚಿತ್ರಿಸಿದವರಿಗೆ ದೊಡ್ಡ ಬಹುಮಾನ ಕೊಡುವುದಾಗಿ ತಿಳಿಸಿದನು.

ಸರಿ, ಮೂವರೂ ತಮ್ಮ ತಮ್ಮ ಮನೆಗಳಲ್ಲಿ ಪಟ್ಟಾಗಿ ಕುಳಿತರು. ಗೊತ್ತಾದ ಕಾಲಕ್ಕೆ ತಮ್ಮ ಚಿತ್ರಗಳನ್ನು ನ್ಯಾಯಾಧೀಶನಲ್ಲಿಗೆ ತಂದರು.

ಮೊದಲನೆಯವನು ವಿಧವಿಧ ಬಣ್ಣಗಳುಳ್ಳ ಹೂಗೊಂಚಲೊಂದನ್ನು ಆಕರ್ಷಕವಾಗಿ ಚಿತ್ರಿಸಿದ್ದನು. ಅದು ಎಷ್ಟು ಸ್ವೈಜವಾಗಿತ್ತೆಂದರೆ ಎಲ್ಲಿಂದಲೋ ಒಂದು ದುಂಬಿಯು ಅದು ನಿಜವಾದ ಹೂವೆಂದೇ ಭ್ರಮಿಸಿ ಜೇನು ಕುಡಿಯಲು ಚಿತ್ರದಮೇಲೆ ಬಂದು ಕುಳಿತು ಮೋಸ ಹೋಯಿತು.

ಎರಡನೆಯವನ ಚಿತ್ರವು ರಸಭರಿತ ಹಣ್ಣುಗಳುಳ್ಳ ಬುಟ್ಟಿಯದು. ಅದು ಎಷ್ಟು ವಾಸ್ತವಿಕವಾಗಿತ್ತೆಂದರೆ, ಎಲ್ಲಿಂದಲೋ ಒಂದು ಗಿಳಿಯು ಹಾರಿ ಬಂದು ಅದು ನಿಜವಾದ ಹಣ್ಣೆಂದು ಭ್ರಮಿಸಿ ಕಚ್ಚಲು ಹೋಯಿತು. ಅದೂ ಮೋಸಹೋಯಿತು.

ಇವೆರಡನ್ನೂ ನೋಡಿ ಆಶ್ಚರ್ಯಗೊಂಡ ನ್ಯಾಯಾಧೀಶನು ಮೂರನೆಯವನ ಚಿತ್ರವನ್ನು ತೋರಿಸೆಂದನು. ಆ ಚಿತ್ರಕ್ಕೆ ತೆರೆ ಹಾಕಿದ್ದಂತೆ ಇದ್ದಿತು. ನ್ಯಾಯಾಧೀಶನು ಕುತೂಹಲದಿಂದ ಚಿತ್ರದ ಬಳಿ ಸೇರಿ ಒಳಗೇನಿರುವುದೋ ಎಂದು ತೆರೆ ಎತ್ತಲು ಹೋದನು. ಆದರೆ ಈ ಸಲ ನ್ಯಾಯಾಧೀಶನೇ ಮೋಸಹೋದನು. ಯಾಕೆಂದರೆ ಅದು ಸ್ವೈಜವಾಗಿ ಚಿತ್ರಿಸಿದ್ದ ತೆರೆಯ ಚಿತ್ರವೇ ಆಗಿತ್ತು. ಹೇಗೆ ತೆರೆ ಎತ್ತಲಾದೀತು?

ಚಿತ್ರಗಾರನ ಚಾತುರ್ಯಕ್ಕೆ ನ್ಯಾಯಾಧೀಶನು ಆಶ್ಚರ್ಯದಿಂದ ತಲೆದೂಗಿ "ಭಲೆ! ಭಲೆ! ಈ ಮೂರನೆಯ ಚಿತ್ರ ಒಬ್ಬ ದೊಡ್ಡ ಮನುಷ್ಯನನ್ನೇ ಭ್ರಮೆ ಗೊಳಿಸಿದೆ. ಆದುದರಿಂದ ಇದೇ ನನ್ನ ಬಹುಮಾನವನ್ನು ಗೆದ್ದಿದೆ" ಎಂದು ಘೋಷಿಸಿ ಬಹುಮಾನವಿತ್ತನು.

## 'ನನ್ನ ಮನೆ'

(ಎನ್ನುವವ ಕನ್ನಡ ಕುವರ)

ನನ್ನೀ ಹೊಸಮನೆ ಹೇಗಿರಬೇಕು?
ಕೆಂಪನೆ ಹೆಂಚನು ಹೊಚ್ಚಿರಬೇಕು.
ಅಂದದ ಕಿಟಕಿಗಳಾಗಿರಬೇಕು.
ಚಂದದ ಚಕಮಕ ಗಾಜಿರಬೇಕು.
ಕದವೂ ಚಿಲುಕವು ಗಟ್ಟಿರಬೇಕು.
ಬಾಗಿಲಿಗೇಳು ಮೆಟ್ಟಲು ಬೇಕು.
ಮೇಜಿರಡೊಳಗಡೆ ಕುರ್ಚಿಗಳೆಂಟು.
ಮಂಚವು ಮೆತ್ತನೆ ಗಾದಿಕವಿಾಟು.
ಒಲೆಗಳ ಮೇಲೆ ಹೊಗೆಕಿಂಡಿ.
ಅಲ್ಲೂ ಇಲ್ಲೂ ಬೆಳಕಿಂಡಿ.
ಅಟ್ಟಗಳೆರಡು ಗೋಪುರ ತುದಿಗೆ.
ಹೂವಿನ ತೋಟವು ಎಡಬಲ ಬದಿಗೆ.
ಹಿತ್ತಿಲಕಡೆ ಬಾವಿಯ ಸಿಹಿನೀರು.
ಸುತ್ತಲು ರಂಜಿಪ ತಳಿರೂ ಹಸುರೂ.
ಗೋಪುರ ತುದಿಗೆ ನಲಿವಪಟ
ಪಟಪಟ ಪಟಪಟ ಕನ್ನಡ ಬಾವುಟ.
ಏರಲಿ,– ನನ್ನೀ ಕೀರ್ತಿ ಪಟ!
ಹಾರಲಿ,– ಎಂಬುದೇ ನನ್ನ ಹಠ.

—ಕೆ. ಮಹಮ್ಮದ್ ಕನ್ನೆಪ್ಪಾಡಿ, ಪೆರಡಾಲ.




ಸೆರಗೂರು ಎಂಬ ಗ್ರಾಮದಲ್ಲಿ ಅಪ್ಪಯ್ಯ ಅಂತ ಒಬ್ಬ ಕೋಮಟಿ, ಒಂದು ಸಂತೆ ದಿನ ರಾತ್ರಿ ಎಂಟು ಗಂಟೆಯ ವೇಳೆಯಲ್ಲಿ ಮನೆಯ ಜಗುಲಿಯ ಮೇಲೆ ಕುಳಿತು ಲಬೊ ಲಬೋ ಎಂದು ಬಾಯಿ ಬಡಿದುಕೊಂಡು ಪ್ರಲಾಪಿಸುತ್ತಿದ್ದ. ಬೀದಿಯಲ್ಲಿ ಹೋಗುತ್ತಿದ್ದ ಶಾನುಭೋಗ ಶಾಮಣ್ಣನವರು "ಏನು ಅಪ್ಪಯ್ಯ ಏಕೆ ಅಳುತ್ತಿರುವೆ?" ಎಂದು ಕೇಳಿದರು.

ಅಪ್ಪಯ್ಯ ಸೆಟ್ಟಿ "ಇನ್ನೇನು ಆಗಬೇಕು ಸ್ವಾಮಿ? ವಾರವೆಲ್ಲಾ ವ್ಯಾಪಾರ ಮಾಡಿದರೆ ಬಂದ ಚಿಲ್ಲರೆಯನ್ನೆಲ್ಲಾ ಸೇರಿಸಿ, ನೂರು ರೂಪಾಯಿನಷ್ಟು ಚಿಲ್ಲರೆಯಾಯಿತು. ಅದನ್ನು ತೆಗೆದುಕೊಂಡು ಹೋಗಿ ಚಿಲ್ಲರೆ ರೂಪಾಯಿಗೆ ಮೂರು ಕಾಸಿನಂತೆ ಕಮಿಷನ್ ತೆಗೆದುಕೊಂಡು ಎಲ್ಲವನ್ನೂ ರೂಪಾಯಿಗಳಾಗಿ ಬದಲಾಯಿಸಿದೆ. ಥಳ ಥಳ ಮೆರೆಯುವ ನೂರು ರೂಪಾಯಿಗಳನ್ನು ಚೀಲದಲ್ಲಿ ಹಾಕಿ ಬಾಯಿ ಕಟ್ಟಿದೆ. ವಿನಿಮಯಕ್ಕೆ ಬಂದ ಕಮಿಷನ್ ಹಣ ರೂಪಾಯಿ ಒಂಬತ್ತಾಣೆಯಿಂದ ಈರುಳ್ಳಿ, ಬೆಳ್ಳುಳ್ಳಿ, ಆಲೂಗೆಡ್ಡೆ, ಮೆಣಸಿನ ಕಾಯಿ ಕೊಂಡು ಬೇರೆ ಚೀಲಗಳಲ್ಲಿ ಹಾಕಿ ಮೂಟೆ ಕಟ್ಟಿದೆ. ಇತ್ತ ಕಡೆ ಬರುತ್ತಿದ್ದ ಎರಡೆತ್ತಿನ ಗಾಡಿಯೊಂದು ಖಾಲಿಯಾಗಿ ಬರುತ್ತಿರುವದನ್ನು ಕಂಡು, ಗಾಡಿಯವನೊಂದಿಗೆ ಗೆಳತನಮಾಡಿ ಮೂಟೆಗಳೊಂದಿಗೆ ಗಾಡಿ ಹತ್ತಿದೆ. ಗಾಡಿಯಲ್ಲಿ ನನಗೆ ತೂಕಡಿಕೆ ಬಂದಿತು. ಮನೆ ಸೇರಿದಮೇಲೆ ಗಾಡಿಯಿಂದ ಒಂದೊಂದೇ ಮೂಟೆಯನ್ನು ತೆಗೆದು, ಜಗುಲಿಯ ಮೇಲೆ ಹಾಕಿದೆ. ಸಾಮಾನಿನ ಚೀಲಗಳು ನಾಲ್ಕೂ ಇವೆ. ಆದರೆ ರೂಪಾಯಿಗಳ ಚೀಲ ಮಾತ್ರ ಕಾಣಿಸಲಿಲ್ಲ. ಆ ಹಾಳಾದ ಗಾಡಿ, ಅದರಲ್ಲಿ ಕುಳಿತುಕೊಳ್ಳಲು ಹಾಕಿದ್ದ ತಡಿಕೆಯೆಲ್ಲಾ ತೂತುಗಳು!" ಎಂದು ಹೇಳಿ ಮತ್ತೊಮ್ಮೆ ಗೋಳೋ ಅಂತ ಅತ್ತ.

ಶಾಮಣ್ಣ ಸಹಾನುಭೂತಿ ಸೂಚಿಸುತ್ತಾ "ಪಾಪ! ಯಾವುದೋ ಒಂದು ರಂಧ್ರದಿಂದ ಮೂಟೆ ಜಾರಿ ರಸ್ತೆಯಲ್ಲಿ ಬಿದ್ದುಬಿಟ್ಟಿರಬಹುದು. ಒಂದು ಕೆಲಸ ಮಾಡು. 'ನನ್ನ ರೂಪಾಯಿಗಳ ಚೀಲ ಕಳೆದು ಹೋಯಿತು. ಅದನ್ನು ತಂದು ಕೊಡುವವರಿಗೆ ಹತ್ತು

ಚಿ. ಪ್ರಸಾದ, ಮೈಸೂರು



ರೂಪಾಯಿ ಬಹುಮಾನ ಕೊಡುತ್ತೇನೆ' ಎಂದು ತಮಟೆಯುವನಿಂದ ಡಂಗುರ ಹೊಡಿಸು. ಅಪ್ಪಯ್ಯ ಸೆಟ್ಟಿ, ನಿನ್ನ ಅದೃಷ್ಟ ಹೇಗಿರುವುದೋ ನೋಡೋಣ" ಎಂದರು.

ಅಪ್ಪಯ್ಯ ಸೆಟ್ಟಿ "ಹತ್ತಲ್ಲ, ಇಪ್ಪತ್ತೈದು ಕೊಡೆಂದರೂ ಕೊಡ್ತೇನೆ. ಐವತ್ತು ಕೊಟ್ಟು ಬಿಡೂ ಅಂದರೂ ಕೊಟ್ಟುಬಿಡ್ತೇನೆ. ನನ್ನ ಚೀಲ ಸಿಕ್ಕಿದರೆ ಅಷ್ಟೇ ಸಾಕು" ಎಂದ.

"ಹತ್ತು ರೂಪಾಯಿ ಕೊಡ್ತೇನೆ ಅಂತ ಹೇಳಯ್ಯಾ, ಸಾಕು. ಅದರಮೇಲೆ ನಿನಗೆ ಎಷ್ಟು ತೋಚುತ್ತೋ ಅಷ್ಟು ಕೊಡು ಬೇಕಾದರೆ" ಎಂದರು ಶಾಮಣ್ಣ.

ಮಾರನೆಯದಿನ ಬೆಳಗಾದ ಕೂಡಲೇ ಯಾವ ಯಾವ ಗ್ರಾಮಗಳಿಂದ ಆ ಸಂತೆಗೆ ಜನ ಬಂದು ಸೇರುವರೋ ಆ ಗ್ರಾಮಗಳಲ್ಲೆಲ್ಲಾ ಶೆಟ್ಟಿ ತನ್ನ ರೂಪಾಯಿಗಳ ಚೀಲವನ್ನು ಕುರಿತು ಡಂಗುರ ಹಾಕಿಸಿದ.

ಹರತಿ ಗ್ರಾಮದಲ್ಲಿ ಜಗುಲಿಯ ಮೇಲೆ ಕುಳಿತು ಜನಿವಾರ ನೂಲುತ್ತಿದ್ದ ಸುಬ್ಬಾಶಾಸ್ತ್ರಿಗಳು ಆ ಡಂಗುರ ಕೇಳಿದ ಕೂಡಲೇ ಒಳಗೆ ಹೋಗಿ "ಲೇ, ನಿನ್ನೆ ನನಗೆ ಸಿಕ್ಕಿದ ಹಣದ ಚೀಲ ಸರಗೂರಿನ ಕೋಮಟಿಯದಂತೆ. ತೆಗೆದುಕೊಂಡು ಹೋಗಿ ಕೊಟ್ಟರೆ ಹತ್ತು ರೂಪಾಯಿ ಬಹುಮಾನ ಕೊಡುವನಂತೆ. ಎಲ್ಲಿ, ಆ ಚೀಲ ಹೀಗೆ ಕೊಡು? ಈಗಲೇ ಒಪ್ಪಿಸಿ ಬರ್ತ್ತೇನೆ" ಎಂದರು.

"ಏನೂ? ಕೈಗೆ ಸಿಕ್ಕಿದ ಗಂಟನ್ನು ಕೈಯಾರ ಒಪ್ಪಿಸಿ ಬರುವಿರಾ? ಎಲ್ಲಿಯಾದರೂ ಕೇಳಿದ್ದೇವೆಯೇ ಈ ವಿಚಿತ್ರವನ್ನು!" ಎಂದಳು ಶಾಸ್ತ್ರಿಗಳ ಹೆಂಡತಿ ವೆಂಕಮ್ಮ.

"ಸುಮ್ಮನೇ ಕೊಡ್ತೇವೆಯೇನೇ? ಹತ್ತು ರೂಪಾಯಿ ಬಹುಮಾನ ಕೊಡ್ತೇನೆಂದಿದ್ದಾನಲ್ಲೇ" ಎಂದರು ಶಾಸ್ತ್ರಿಗಳು.

"ನಿಮ್ಮ ಬುದ್ಧಿಗೆ ಬೆಂಕಿ ಹಾಕಬೇಕು. ಗಮ್ಮನೆ ಇದ್ದುಬಿಟ್ಟರೆ ಆ ಚೀಲದಲ್ಲಿರುವ ಹಣವೆಲ್ಲವೂ ನಮ್ಮದೇ ತಾನೇ! ಹತ್ತು ರೂಪಾಯಿ ಹೆಚ್ಚೋ? ಒಂದು ಚೀಲ ಹಣ ಹೆಚ್ಚೋ?" ಎಂದಳು ವೆಂಕಮ್ಮ.

"ಒಡವೆ ಯಾರದೋ ತಿಳಿದಮೇಲೆ ನಮ್ಮ ಹತ್ತಿರವಿಟ್ಟುಕೊಳ್ಳುವುದು ಕಳ್ಳತನವಾಗುವುದು. ಆದರೂ ಬೇರೆಯವರ ಹಣ ನಮಗೆ ಏಕೆ? ತಾ, ಇಲ್ಲಿ ತಾ, ಆ ಚೀಲ. ಕೊಟ್ಟುಬಿಟ್ಟು ಬಂದುಬಿಡ್ತೇನೆ"





"ಇದೋ, ತೆಗೆದುಕೊಂಡು ಹೋಗಿ" ಎಂದು ವೆಂಕಮ್ಮ ಕೋಪದಿಂದ ಚೀಲವನ್ನು ತಂದು ಶಾಸ್ತ್ರಿಗಳ ಮುಂದೆ ಎಸೆದಳು.

ಶಾಸ್ತ್ರಿಗಳು ಆ ಚೀಲ ತೆಗೆದುಕೊಂಡು ಸರಗೂರು ಸೇರಿದರು. "ಸಾಹುಕಾರ್ರೇ, ಇದೇ ಊರಲ್ಲಿ ಗೋಪೀನಾಥರಾಯರ ಮನೆಯಲ್ಲಿ ಮದುವೆ. ಲಗುಬಗನೆ ಹೋಗುತ್ತಿದ್ದರೆ ಬೀದಿಯಲ್ಲಿ ಈ ಚೀಲ ನನ್ನ ಕಾಲಿಗೆ ತಗಲಿ ನಾನು ಕೆಳಗೆ ಬಿದ್ದೆ. ಏನಿದು ಅಂತ ಮುಟ್ಟಿ ನೋಡಿದರೆ ರೂಪಾಯಿಗಳ ಗಂಟಿನ ಹಾಗೇ ಕಾಣಿಸಿತು. ಆ ಹಣವನ್ನು ನಿಮಗೆ ಒಪ್ಪಿಸಿ, ಬಹುಮಾನ ಪಡೆಯುವ ಉದ್ದೇಶದಿಂದ ಬಂದೆ" ಎಂದರು.

ಅಪ್ಪಯ್ಯ ಸೆಟ್ಟಿ ರೂಪಾಯಿಯ ಚೀಲ ಕಂಡಕೂಡಲೇ ಪರಮಾನಂದಭರಿತನಾದ. ಚೀಲದ ಬಾಯಿ ಬಿಚ್ಚಿ, ರೂಪಾಯಿಗಳನ್ನು ಒಂದು ಸಾರಿ ಲೆಕ್ಕ ಮಾಡಿದ. ನೂರು ರೂಪಾಯಿ ಸರಿಯಾಗಿತ್ತು. ಇನ್ನು ಆ ಬ್ರಾಹ್ಮಣನಿಗೆ ಬಹುಮಾನವಾಗಿ ಆ ಹಣದಿಂದ ಹತ್ತು ರೂಪಾಯಿ ಕೊಡುವುದೊಂದೇ ಬಾಕಿ. ಆದರೆ ಸೆಟ್ಟಿಗೆ ಆ ಚೀಲ ಕೈಗೆ ಸಿಕ್ಕಿದ ಕೂಡಲೇ ಆ ಹತ್ತು ರೂಪಾಯಿ ಕೊಡಲು ಮನ ಒಡಂಬಡಲಿಲ್ಲ!

"ಶಾಸ್ತ್ರಿಗಳೇ, ಈ ಚೀಲದಲ್ಲಿ ನೂರ ಹತ್ತು ರೂಪಾಯಿಗಳಿರಬೇಕು. ಲೆಕ್ಕ ಮಾಡಿ ನೋಡಿದರೆ ನೂರುಮಾತ್ರವಿದೆ. ನೀವು ನಿಮ್ಮ ಪಾಲಿನ ಬಹುಮಾನವನ್ನು ಈಗಾಗಲೇ ತೆಗೆದುಕೊಂಡಂತಿದೆಯಲ್ಲಾ" ಎಂದ.

ಶಾಸ್ತ್ರಿಗಳು ಆ ಮಾತುಗಳನ್ನು ಕೇಳಿ ನಿಶ್ಚೇಷ್ಟಿತರಾದರು. ಸೆಟ್ಟಿ ಹೀಗೆ ಮೋಸಮಾಡುವನೆಂದು ತಿಳಿದಿರಲಿಲ್ಲ. ಮರುಮಾತನಾಡಲಾರದೆ ಶಾಸ್ತ್ರಿಗಳುಮನೆ ದಾರಿ ಹಿಡಿದರು.

ಹೀಗೆ ನಿರಾಶೆಗೊಂಡು ಮನೆಗೆ ಹೋಗುತ್ತಿರುವಲ್ಲಿ ದಾರಿಯಲ್ಲಿ ಶಾನುಭಾಗ ಶಾಮಣ್ಣನವರು ಎದುರಿಗೆ ಸಿಕ್ಕಿದರು. ನಡೆದ ವಿಷಯವನ್ನೆಲ್ಲಾ ಶಾಸ್ತ್ರಿಗಳು ಆತನಿಗೆ ಹೇಳಿದರು. ಅದನ್ನು ಕೇಳಿ ಶಾಮಣ್ಣನವರಿಗೆ ಕೋಪ ಬಂದಿತು. "ಮುನಸೀಫರ ಹತ್ತಿರ ಹೋಗಿ ಫಿರ್ಯಾದು ಮಾಡಿ, ನಿಮ್ಮ ಬಹುಮಾನದ ಹಣ ಅಲ್ಲೇ ನಿಮಗೆ ಕೊಡಿಸಿಕೊಡ್ತಾರೆ. ಎಂತಹ ಮೋಸ! ಅನ್ಯಾಯ" ಎಂದು ಚಡಪಡಿಸಿದರು.

ಅಂತೆಯೇ ಶಾಸ್ತ್ರಿಗಳು ಹೋಗಿ ಮುನಿಸೀಫರಿಗೆ ಫಿರ್ಯಾದು ಮಾಡಿದರು. ಅಲ್ಲಿನ ಮುನಸೀಫರು ತುಂಬಾ ಬುದ್ಧಿವಂತರು. ಸಂಗತಿ ಸಂದರ್ಭಗಳನ್ನು ಕೂಡಲೇ ಗ್ರಹಿಸಿದರು. ಸೆಟ್ಟಿಯನ್ನು ಬರಮಾಡಿದರು.

"ಅಪ್ಪಯ್ಯ ಸೆಟ್ಟರೇ, ಶಾಸ್ತ್ರಿಗಳಿಗೆ ನಿಮ್ಮ ವಾಗ್ದಾನದಂತೆ ಹತ್ತುರೂಪಾಯಿ ಕೊಟ್ಟು ಬಿಡಿ" ಎಂದರು. ಕೋಮಟಿ ಒಪ್ಪಿಕೊಳ್ಳಲಿಲ್ಲ. "ನನ್ನ ಚೀಲದಲ್ಲಿ ನೂರಾಹತ್ತು ರೂಪಾಯಿಗಳಿರಬೇಕು. ಈಗ ನೂರುಮಾತ್ರ ಇದೆ. ಮಿಕ್ಕ ಹತ್ತುರೂಪಾಯಿ ಈ ಬ್ರಾಹ್ಮಣನೇ ಲಪಟಾಯಿಸಿ, ಮತ್ತೆ ಬಹುಮಾನ ಕೇಳುತ್ತಿದ್ದಾನೆ. ಈತನಿಗೆ ಇನ್ನೊಂದು ಕಿಲುಬು ಕಾಸನ್ನೂ ಕೊಡಬೇಕಾದುದಿಲ್ಲ" ಎಂದು ಹಳೇ ಪಟ್ಟನ್ನೇ ಹಿಡಿದ ಸೆಟ್ಟಿ.

ಆಗ ಮುನಸೀಫರು "ಸೆಟ್ಟಿ, ಈ ಬ್ರಾಹ್ಮಣ ಕಟ್ಟು ಕೂಡ ಬಿಚ್ಚದೆ ತಂದ ಚೀಲದಲ್ಲಿ ನೂರು ರೂಪಾಯಿ ಮಾತ್ರವೇ ಇದೆಯೆಂದು ತಾನೇ ಹೇಳಿದೆ" ಎಂದು ಕೇಳಿದರು. "ಹೌದು, ಮಹಾಸ್ವಾಮಿ. ಆತನ ಕಣ್ಣಮುಂದೆಯೇ ನಾನೇ ಲೆಕ್ಕಮಾಡಿದೆ" ಎಂದ ಸೆಟ್ಟಿ. ಇದನ್ನು ಕೇಳಿ ಶಾನುಭಾಗರೊಂದಿಗೆ ಮುನಸೀಫರು "ಶಾಮಣ್ಣನವರೇ ಇವರಿಬ್ಬರೂ ಪ್ರಮಾಣಮಾಡಿ ಹೇಳುತ್ತಿರುವುದರಿಂದ ಇಬ್ಬರ ಮಾತೂ ನಂಬಲೇಬೇಕು. ಶೆಟ್ಟಿ ಕಳೆದುಕೊಂಡಿದ್ದು ನೂರಾಹತ್ತು ರೂಪಾಯಿಗಳಿರುವ ಚೀಲ. ಸುಬ್ಬಾಶಾಸ್ತ್ರಿಗಳಿಗೆ ಸಿಕ್ಕಿದ್ದು ನೂರು ರೂಪಾಯಿನ ಚೀಲ. ಇದರಿಂದ ಶಾಸ್ತ್ರಿಗೆ ಸಿಕ್ಕಿದ್ದು ಶೆಟ್ಟಿ ಕಳೆದುಕೊಂಡ ಚೀಲವಲ್ಲವೆಂದು ತಿಳಿದು ಬರುತ್ತದೆ.....ಶಾಸ್ತ್ರಿಗಳೇ, ಈ ಚೀಲ ನೀವು ತೆಗೆದುಕೊಂಡು ಹೋಗಿ, ನೂರು ರೂಪಾಯಿನ ಚೀಲ ಕಳೆದು ಹೋಯಿತೆಂದು ಯಾರಾದರೂ ಬಂದರೆ ಕೊಟ್ಟುಬಿಡುವಿರಂತೆ. ಅಪ್ಪಯ್ಯ ಸೆಟ್ಟಿ ಹೋಗು.....ನೀನು ಕಳೆದುಕೊಂಡ ನೂರಾಹತ್ತು ರೂಪಾಯಿನ ಚೀಲ ಯಾರಾದರೂ, ಎಂದಾದರೂ ತಂದು ಕೊಡದೆ ಇರುತ್ತಾರೆಯೇ ನೋಡುವಾ...." ಎಂದು ತೀರ್ಪಿತ್ತು, ಕಛೇರಿಯಿಂದ ಎದ್ದು ಹೊರಟು ಹೋದರು. ಸೆಟ್ಟಿ ಪೆಚ್ಚುಮೋರೆ ಹಾಕಿಕೊಂಡು ಮನೆಗೆ ಹೋದ.






## 3

[ಭೂಗೃಹದಲ್ಲಿ ತನ್ನ ಮೂವರು ಮಕ್ಕಳನ್ನು ಬಚ್ಚಿಟ್ಟು, ಸಂತೋಷದಿಂದ ಮನೆಯ ದಾರಿ ಹಿಡಿದ ರಾಜನು, ಹಠಾತ್ತನೆ ಗೋಳೋ ಎಂದು ಅಳುತ್ತಾ ಅರಮನೆ ಸೇರುವುದೂ, ಅದನ್ನು ಕಂಡು ರಾಣಿ ಬುಡ ಕತ್ತರಿಸಿದ ಬಾಳೆ ಮರದಂತೆ ಕುಸಿದು ಬೀಳುವುದೂ ನೀವು ಹಿಂದಿನಸಾರಿ ಓದಿದಿರಿ. ಮುಂದೇನಾಯಿತೆಂದರೆ.]

ಸುತ್ತಲೂ ನೆರೆದಿದ್ದ ಪರಿಚಾರಕರೂ, ದಾಸಿಜನರೂ ರಾಜನನ್ನು ಸಮಾಧಾನ ಪಡಿಸುತ್ತಿದ್ದರು. ಮೂರ್ಛೆ ಬಿದ್ದಿದ್ದ ರಾಣಿಗೆ ಉಪಚಾರ ಮಾಡುತ್ತಿದ್ದರು. ಸ್ವಲ್ಪ ಸಮಯದವರೆವಿಗೂ ಅಲ್ಲಿ ಸೇರಿದ್ದವರಲ್ಲಿ ಯಾರ ಮುಖದಲ್ಲೂ ಕಳೆಯಾಗಲೀ ಕಾಂತಿಯಾಗಲೀ ಇರಲಿಲ್ಲ. ಇಷ್ಟರಲ್ಲಿ ಆಸ್ಥಾನ ವೈದ್ಯನು ಬಂದು ರಾಣಿಗೆ ಔಷಧವನ್ನು ಕೊಟ್ಟನು. ಆಮೇಲೆ ಸ್ವಲ್ಪ ಸಮಯಕ್ಕೆ ರಾಣಿಗೆ ಸ್ಮೃತಿ ಬಂತು. ಆಗ ರಾಜನ ಮನ ಒಂದು ಸ್ತಿಮಿತಕ್ಕೆ ಬಂತು. ನಂತರ ವೈದ್ಯನು ರಾಜನನ್ನು ವಿಷಯವೇನೆಂದು ಕೇಳಲು ಆತ ಹೀಗೆ ಹೇಳಿದನು.

“ಪದ್ಧತಿಯಂತೆ ದಾಸಿಯರೊಂದಿಗೆ ಮಕ್ಕಳನ್ನು ಜೊತೆಯಲ್ಲಿ ಕರೆದುಕೊಂಡು ನಮ್ಮ ತೋಟದಲ್ಲಿ ತಿರುಗಾಡಲು ಹೋದೆ. ಈ ನಾಲ್ಕು ವರ್ಷಗಳಲ್ಲಿ ನಮ್ಮ ಮಕ್ಕಳು ಎಷ್ಟೋ ಗಂಡಾಂತರಗಳಿಂದ ಪಾರಾಗಿ ಜೀವಿಸಿರುವುದನ್ನು ಕಣ್ಣಾರ ಕಂಡವನಾದ್ದರಿಂದ ಸದಾ ಜಾಗರೂಕತೆ ವಹಿಸಿರಬೇಕಾದುದು ಅವಶ್ಯಕವಾಯಿತು. ಮಕ್ಕಳು ಮನೆ ಬಿಟ್ಟು ಹೊರಗೆ ಹೊರಟಾಗಲೆಲ್ಲಾ ಅವರಕೂಡ ನಾನೂ ಒಂದು ನೂರು ಸೈನಿಕರನ್ನು ಸಂಗಡವಿಟ್ಟುಕೊಂಡಿರಬೇಕಾಗುತ್ತಿತ್ತು. ಅದೇ ರೀತಿ ಇಂದೂ ಸಹ ತೋಟದ ಸುತ್ತಲೂ ನೂರುಜನ ಸೈನಿಕರನ್ನು ಕಾವಲು





ಇಟ್ಟು ಅವರ ಮಧ್ಯೆ ನಾನೂ ದಾಸಿಯರೂ ಮಕ್ಕಳನ್ನು ಸಾವಿರ ಕಣ್ಣುಗಳಿಂದ ನೋಡಿ ಕೊಳ್ಳುತ್ತಲೇ ಇದ್ದೆವು. ಇಷ್ಟರಲ್ಲಿ ಒಂದು ದೊಡ್ಡ ಸುಂಟರಗಾಳಿ ಬಂತು. ಆ ಸುಂಟರಗಾಳಿಗೆ ಅಗಾಧವಾದ ಧೂಳೆದ್ದು, ನಾವು ಒಂದು ಕ್ಷಣ ಕಣ್ಣು ಮುಚ್ಚಿದೆವು. ಮತ್ತೆ ಕಣ್ಣು ತೆರೆಯುವಲ್ಲಿ ಮೂರು ರಣ ಹದ್ದುಗಳು ಹಾರಿ ಬಂದು ನಮ್ಮ ಮುದ್ದಿನ ಮಕ್ಕಳು ಮೂವರನ್ನೂ ಎತ್ತಿಕೊಂಡು ಹಾರುತ್ತಿರುವುದು ಕಾಣಿಸಿತು....." ಎಂದು ಮತ್ತೇನೋ ಹೇಳುತ್ತಿರುವಲ್ಲಿ ರಾಣಿ 'ಹಾ' ಎಂದು ಮತ್ತೆ ಮೂರ್ಛೆ ಹೋದಳು. ಪುನಃ ಪರಿಚಾರಿಕೆಯರು ಉಪಚಾರ ಮಾಡಲಾರಂಭಿಸಿದರು. ತುಸು ಹೊತ್ತಿಗೆ ರಾಣಿಗೆ ಸ್ಮೃತಿ ಬಂತು. ಆಗ ರಾಜ ತನ್ನ ಮಾತು ಮುಂದುವರಿಸಿದ. "ಇದೆಲ್ಲವೂ ಕ್ಷಣಕಾಲದಲ್ಲಿ ನಡೆಯಿತು. ಆದಾಗ್ಯೂ ಆ ರಣಹದ್ದುಗಳು ಹಾರಿದ ದಿಕ್ಕಿನಲ್ಲಿ ನಾನೂ ನೂರು ಜನ ಸೈನಿಕರೂ, ದಾಸಿಯರೂ ಓಡಿದೆವು. ನಡೆದಾಡುವ ಅಭ್ಯಾಸವಿಲ್ಲದ ನಾನು ಹಿಂದೆ ಬಿದ್ದೆ. ನನ್ನ ಪರಿವಾರ ಮಾತ್ರ ಶರವೇಗದಲ್ಲಿ ಆ ರಣಹದ್ದುಗಳು ಹಾರಿದ ದಿಕ್ಕಿನಕಡೆ ಓಡಿದರು. ಆದರೆ ತುಸ ಸಮಯಕ್ಕೆಲ್ಲಾ ಆ ರಣಹದ್ದುಗಳು ಕಣ್ಣಿಗೆ ಕಾಣದಂತೆ ಮಾಯವಾದುದರಿಂದ ನಿರಾಶರಾಗಿ ಪರಿವಾರವೆಲ್ಲಾ ಪೆಚ್ಚುಮುಖ ಹಾಕಿಕೊಂಡು ಹಿಂತಿರುಗಿದರು. ಇದನ್ನು ಕಂಡು ನಾನು ಮತ್ತೆ ಒಂದು ಹೆಜ್ಜೆಯಾದರೂ ಮುಂದಕ್ಕಿಡಲಾರದೆ ಹೋದೆ. ಇಷ್ಟರಲ್ಲಿ ಮತ್ತೊಂದು ಅದ್ಭುತ ವಿಚಿತ್ರ ನಡೆಯಿತು. ಹಿಂತಿರುಗಿ ಬರುತ್ತಿದ್ದ ನನ್ನ ಪರಿವಾರ ನೂರುಜನ ಸೈನಿಕರೂ, ಮೂವರು ದಾಸಿಯರೂ ನಾನು ನೋಡುತ್ತಿದ್ದಂತೆಯೇ ಸ್ವಲ್ಪದೂರ ಬಂದು ಒಂದೇ ಸಾರಿ ಪಕ್ಷಿಗಳ ಹಾಗೆ ಬದಲಾಯಿಸಿ, ಪುನ್ರನೆ ಆ ರಣಹದ್ದುಗಳು ಹಾರಿದ ದಿಕ್ಕಿನಲ್ಲೇ ಅವರೂ ಸಹ ಹಾರಿ ಹೋದರು. ಇದೆಲ್ಲವನ್ನೂ ಕಂಡು ನನ್ನ ಮನಸ್ಸು ವಿಹ್ವಲಗೊಂಡಿತು, 'ಇನ್ನೆಷ್ಟು ಕಷ್ಟಗಳನ್ನು ಅನುಭವಿಸಬೇಕೋ ದೇವರು ನನ್ನನ್ನು ಇನ್ನೂ ಈ ಪ್ರಪಂಚದಲ್ಲಿ ಏಕೆ ಉಳಿಸಿರುವನೋ' ಎಂತ ಅನ್ನಿಸಿತು" ಎಂದು ಮಾತು ಮುಗಿಸಿ, ರಾಜನು ದುಃಖಿಸಲು ಪ್ರಾರಂಭಿಸಿದನು.









ಆ ವೇಳೆಗಾಗಲೇ ಎಲ್ಲ ವಿಷಯಗಳನ್ನು ಕೇಳಿದ್ದ ಜೋತಿಷ್ಕನೂ ಸಹ ಅಲ್ಲಿಗೆ ಧಾವಿಸಿ ಬಂದನು. ಆತನನ್ನು ಕಂಡಕೂಡಲೇ ರಾಣಿ ಆತನ ಪಾದಗಳಮೇಲೆ ಬಿದ್ದು "ನೀವು ಅಂದು ಅಷ್ಟು ಎಚ್ಚರಿಕೆ ಕೊಟ್ಟರೂ ನಾವು ಮಕ್ಕಳನ್ನು ಉಳಿಸಿಕೊಳ್ಳಲು ಅಶಕ್ತರಾದೆವು. ನನ್ನ ಚಿನ್ನಾರಿಗಳು ನನ್ನ ಎದುರಿಗಿಲ್ಲದಿದ್ದರೆ ಹೋಗಲಿ, ಮರೆಮಾಚದೆ ಒಂದು ವಿಷಯ ಮಾತ್ರ ಹೇಳಿ ಬಿಡಿ. ಅವರು ಜೀವಂತರಾಗಿರುವರೋ ಇಲ್ಲವೋ ತಿಳಿಸಿ. ಅದು ತಿಳಿದುಕೊಂಡ ಹೊರತು ನಾನು ಜೀವಿಸಲಾರೆ' ಎಂದು ಗೋಳಿಡಲಾರಂಭಿಸಿದಳು. ಜೋತಿಷ್ಕ ಮತ್ತೊಂದು ಸಾರಿ ಮಕ್ಕಳ ಜಾತಕಗಳನ್ನು ತರಿಸಿಕೊಂಡು, ನಿಧಾನವಾಗಿ ಪರಿಶೀಲಿಸಿ ಈ ರೀತಿ ಹೇಳಿದ.

"ತಾಯಿ, ಜಾತಕರೀತ್ಯಾ ಮಕ್ಕಳಿಗೆ ಈ ವರ್ಷ ಯಾವ ವಿಧವಾದ ಗಂಡಾಂತರವೂ ಕಾಣಬರುತ್ತಿಲ್ಲ. ಮತ್ತೆ ಈ ಅನಾಹುತ ಹೇಗೆ ಸಂಭವಿಸಿತೋ ನನಗೆ ತಿಳಿಯದು. ಮಕ್ಕಳು ಎಲ್ಲಿರುವರೋ ನಾನು ನಿರ್ದಿಷ್ಟವಾಗಿ ಹೇಳಲಾರೆ. ಆದರೆ ಇರುವ ಜಾಗದಲ್ಲಿ ಅವರು ಮೂವರೂ ಕ್ಷೇಮವಾಗಿದ್ದಾರೆ. ಮಕ್ಕಳು ಮಾತ್ರವೇ ಅಲ್ಲ, ಅವರ ಸಂಗಡ ಕಾವಲಿಗಾಗಿ ಹೊರಟ ಮೂರು ಜನ ಪರಿಚಾರಿಕೆಯರೂ, ನೂರು ಜನ ಸೈನಿಕರೂ ಸಹ ಸುರಕ್ಷಿತವಾಗಿರುವರು. ಈ ಮೂರು ವರ್ಷಗಳಲ್ಲಿ ಅವರು ಎಂದೋ ಒಂದು ದಿನ ಮಾವನೂಲು ರೂಪದಲ್ಲಿ ಬರುವ ಚಿಹ್ನೆಗಳು ಸ್ಪಷ್ಟವಾಗಿ ಕಾಣುತ್ತಿದೆ. ಆದ್ದರಿಂದ ದೇವರ ಮೇಲೆ ಭಾರ ಹಾಕಿ ಆ ಸುದಿನಕ್ಕಾಗಿ ಎದುರು ನೋಡುತ್ತಿರುವುದಕ್ಕಿಂತಲೂ ನಾವು ಮತ್ತೇನು ಮಾಡಬಲ್ಲೆವು? ತಾಯಿ ಧೈರ್ಯ ತಂದುಕೊಳ್ಳಿ" ಎಂದು ಹೇಳಿದನು.

ರಾಜನು ಅರಮನೆಗೆ ಹಿಂತಿರುಗಿದಾಗ ಗೊಳೋ ಎಂದು ಅಳುತ್ತಾ ಬಂದುದೂ, ಆ ತರುವಾಯ ತನ್ನ ವ್ಯಾಕುಲಕ್ಕೆ ಅನುಗುಣವಾಗಿ ಅನೇಕ ವಿಷಯಗಳನ್ನು ನಡೆದಂತೆ ಬಣ್ಣಿಸಿ, ರಾಣಿಗೆ ಸಮಾಧಾನ ಮಾಡುವುದೂ ಎಲ್ಲಾ ಒಂದು ಕಲ್ಪಿತ ಕಥೆ ಎಂದು ಈವರಿಗಾಗಲೇ ನೀವುಗಳು ಗ್ರಹಿಸಿರಬಹುದು. ತನ್ನ ಮೂವರು ಮಕ್ಕಳು, ಅವರ ಜೊತೆಗಿದ್ದ ದಾಸಿಯರೂ, ನೂರು ಜನ ಸೈನಿಕರು




ಕಾಣದಿರುವುದನ್ನು ಕಂಡು ರಾಣಿ ತನ್ನನ್ನು ಪ್ರಶ್ನೆ ಮಾಡಿದರೆ ಏನು ಉತ್ತರ ಕೊಡಲಿ ಎಂದು ರಾಜನು ದೀರ್ಘಾಲೋಚನೆ ಮಾಡಿ ಈ ನಾಟಕ ಹೂಡಿದನು.

ನೆಲಮಾಳಿಗೆಯಲ್ಲಿ ಬಚ್ಚಿಟ್ಟಿರುವ ವಿಷಯ ಬಯಲುಪಡಿಸೋಣವೆಂದರೆ ಆ ಸಂಗತಿ ತನ್ನ ಮಕ್ಕಳನ್ನು ನುಂಗಿ ಹಾಕಬೇಕೆಂದಿರುವ ಆ ದುಷ್ಟಗ್ರಹ ಎಲ್ಲಿ ತಿಳಿದುಬಿಡುವುದೋ ಎಂಬಅನುಮಾನ. ಏನಾದರೇನ.? ಅಪರೂಪವಾಗಿ ಪಡೆದ ತನ್ನ ಕುವರಿಯರನ್ನು ಕಾಪಾಡಲು ರಾಜನು ಎಷ್ಟೋ ಚಾತುರ್ಯದಿಂದ ಯಾರಿಗೂ ಅನುಮಾನ ಬರದಂತೆ ಈ ರೀತಿ ಒಂದು ದೊಡ್ಡ ಸುಳ್ಳು ನುಡಿದನು.

ರಾಜನು ಹೂಡಿದ ಕಪಟನಾಟಕವನ್ನು ರಾಣಿ ನಂಬಿದಳು. ಪರಿವಾರವೆಲ್ಲಾ ನಂಬಿತು. ತನ್ನ ಕುವರಿಯರು ಎಲ್ಲೋ ಒಂದು ಜಾಗದಲ್ಲಿ ಸುರಕ್ಷಿತರಾಗಿರುವರೆಂದು ಜೋತಿಷ್ಕನು ಹೇಳಿದಮೇಲೆ ರಾಣಿಗೆ ಸ್ವಲ್ಪ ಸಮಾಧಾನವಾಯಿತು. ಎಲ್ಲೋ ಬದುಕಿದ್ದರೆ ಸಾಕು ಎಂದು ಮನಸ್ಸಿನಲ್ಲಿ ತೃಪ್ತಿ ಹೊಂದಿದಳು. ತಕ್ಷಣವೇ ಸೇವಕರನ್ನು ರಾಜ್ಯದ ನಾಲ್ಕು ಮೂಲೆಗಳಿಗೂ ಅಟ್ಟಿ ಮಕ್ಕಳನ್ನು ಹುಡುಕಿ, ತರಿಸಬೇಕೆಂದು ರಾಜನಿಗೆ ಕೋರಿಕೊಂಡಳು ರಾಣಿ. ರಾಜನಿಗೆ ಮಕ್ಕಳು ಭೂಗೃಹದಲ್ಲಿರುವುದು ತಿಳಿಯದೆ? ಆದರೂ ರಾಣಿಯ ಕೋರಿಕೆಯಂತೆ ಆಕೆಯನ್ನು ಸಂತೃಪ್ತಿ ಪಡಿಸುವ ಸಲುವಾಗಿ ಸೇವಕರನ್ನು ದೇಶದ ನಾಲ್ಕು ಮೂಲೆಗಳಿಗೂ ಕಳುಹಿಸಬೇಕಾದುದು ಅನಿವಾರ್ಯವಾಯಿತು.

ಕೂಡಲೇ ರಾಜಭಟರು ಕುದುರೆಗಳನ್ನು ಹತ್ತಿ ಹೊರಟರು. ಆದರೆ ಪ್ರಪಂಚದಲ್ಲಿ ಮನುಷ್ಯರಿಗೆ ಕಾಣುವ ಜಾಗದಲ್ಲಿ ಆ ಮಕ್ಕಳು ಇದ್ದರಲ್ಲವೇ ಅವರ ಸುಳಿವು ಸಿಗಬೇಕಾದರೆ? ಆ ಮಕ್ಕಳೋ ಭೂಗೃಹದಲ್ಲಿ ಸುಖವಾಗಿದ್ದಾರೆ. ಆದುದರಿಂದ ಹೋದ ಸೈನಿಕರು ಒಬ್ಬೊಬ್ಬರೇ ಮಕ್ಕಳು ಕಾಣಿಸಲಿಲ್ಲವೆಂದು ಹಿಂದಕ್ಕೆ ಬಂದು ಬಿಟ್ಟರು. ದಿನ ಕಳೆದಂತೆ ರಾಣಿಗೆ ಮಕ್ಕಳನ್ನು ಕುರಿತು ಕಾತುರ, ಕಳವಳ ಹೆಚ್ಚಾಗುತಿತ್ತು. ರಾಜನು ಮಾತ್ರ ಬುದ್ಧಿವಂತಿಕೆಯಿಂದ ನಾಟಕ ಹೂಡಿ ತನ್ನ ಮಕ್ಕಳ ವಿಚಾರವಾಗಿ ಯಾರಿಗೂ ಅನುಮಾನ ಬರದಂತೆ ಏರ್ಪಾಟು

ಮಾಡಿದೆನೆಲ್ಲಾ ಎಂದು ಆನಂದದಿಂದ ಹೆಮ್ಮೆ ಪಟ್ಟುಕೊಂಡನು. ಆದರೆ ಎಲ್ಲರ ಮುಂದೆ ತಾನೂ ಸಹ ಮಕ್ಕಳಿಗಾಗಿ ಕಳವಳಪಟ್ಟು ದುಃಖವನ್ನು ನಟಿಸುತ್ತಿದ್ದನು.

ರಾಜನು ಮತ್ತೊಬ್ಬರ ಕಣ್ಣಿಗೆ ಬೀಳದಂತೆ ಪ್ರತಿದಿನವೂ ಭೂಗೃಹಕ್ಕೆ ಹೋಗಿ ಬರುತ್ತಿದ್ದನು. ತನ್ನ ಮೂವರು ಕುವರಿಯರೂ ಸುರಕ್ಷಿತವಾಗಿ ತಾನು ಏರ್ಪಡಿಸಿದ ನೌಕರರ ರಕ್ಷಣೆಯಲ್ಲಿ ಬೆಳೆಯುತ್ತಿರುವುದನ್ನು ಕಂಡು ನಿಶ್ಚಿಂತೆಯಿಂದ ಇದ್ದನು. ಹೀಗೇ ಒಂದು ವಾರಕಳೆಯಿತು. ರಾಜನಿಗೆ ಈಗ ಮತ್ತೊಂದು ದೊಡ್ಡ ಅನುಮಾನವುಂಟಾಯಿತು. ಭೂಗೃಹದಲ್ಲಿ ಮಕ್ಕಳು ಸುರಕ್ಷಿತವಾಗಿರುವರೋ ಇಲ್ಲವೋ ಎಂದು ತಿಳಿದುಕೊಂಡ ಹೊರತು ಆತನು ಒಂದು ದಿನವಾದರೂ ಕಳೆಯಲು ಅಸಾಧ್ಯವಾಗಿತ್ತು. ಆದರೆ ಬೇರೊಬ್ಬರಿಗೆ ತಿಳಿಯದೆ ಪ್ರತಿದಿನಾ ಹೀಗೆ ಕಳ್ಳತನದಿಂದ ಭೂಗೃಹಕ್ಕೆ ಹೋಗಿ ಬರುವುದು ತುಂಬಾ ಕಷ್ಟಕರವಾದುದೆಂದು ತೋರಿತು. ಒಂದು ದಿನವಲ್ಲ ಇನ್ನೊಂದು ದಿನ ಈ ವಿಷಯ ಯಾರೋ ಒಬ್ಬರ ಕಣ್ಣಿಗೆ ಬೀಳುವುದು ಖಂಡಿತ. ಅದು ಬಾಯಿಂದ ಬಾಯಿಗೆ ಬಯಲಾಗಿ ತಾನು ಯಾವ ದುಷ್ಟಗ್ರಹಕ್ಕೆ ಭಯಪಡುತ್ತಿರುವನೋ ಆ ಗ್ರಹಕ್ಕೆ ತಿಳಿದು ಬಿಡಬಹುದು. ಮಕ್ಕಳ ಸುಳುವು ತಿಳಿಯಿತೆಂದರೆ ಸಾಕು. ಅದು ಯಾವುದೋ ಒಂದು ವಿಧದಿಂದ ಅವರನ್ನು ಹೊಟ್ಟೆಯಲ್ಲಿ ಹಾಕಿ



ಕೊಳ್ಳದೆ ಸುಮ್ಮನಿರುವುದಿಲ್ಲ. ಅದರಿಂದ ಏನು ಮಾಡಲೀ ಎಂದು ಆ ರಾಜನು ಒಂದು ಹೊಸ ಭಯದಿಂದ ಕೊರಗುತ್ತಿದ್ದನು. ಎಷ್ಟು ಆಲೋಚಿಸಿದರೂ ಯಾವ ಉಪಾಯವೂ ಹೊಳೆಯದಾಯಿತು. ಹೀಗೆ ಮಾತ್ರ ನಾಲ್ಕು ದಿನಗಳು ಕಳೆದವು.

ಒಂದುದಿನ ರಾಜನು ಸಾಯಂಕಾಲ ಮಕ್ಕಳನ್ನು ನೋಡಿಕೊಂಡು ಸ್ವಲ್ಪಸಮಯದ ಹಿಂದೆ ತಾನೆ ಹಿಂತಿರುಗಿದ್ದನು. ಮಕ್ಕಳು ಸುರಕ್ಷಿತವಾಗಿಯೇ ಇದ್ದರು. ಅದರಿಂದ ರಾಜನು ತನ್ನ ಶಯನಾಗಾರದಲ್ಲಿ ಯಾವೊಂದುವಿಧವಾದ ಚಿಂತೆಯೂ ಇಲ್ಲದೆ ನಿಶ್ಚಿಂತೆಯಾಗಿ ನಿದ್ರಿಸುತ್ತಿದ್ದನು. ಸುಖನಿದ್ದೆಯಲ್ಲಿರುವಾಗ ಮಧ್ಯೆ ರಾತ್ರಿಯಲ್ಲಿ ಯಾರೋ ಬಂದು ತನ್ನನ್ನು ತಟ್ಟಿ ಎಬ್ಬಿಸುತ್ತಿರುವಂತೆ





ತೋರಿತು. ಕಣ್ಣು ತೆರೆದು ನೋಡಿದ. ತನ್ನ ಕಣ್ಣುಗಳನ್ನು ತಾನೇ ನಂಬಲಾರದೆ ಹೋದ. ಏಕೆಂದರೆ ಆ ಬಂದ ವ್ಯಕ್ತಿ ಮತ್ತೆ ಯಾರೂ ಅಲ್ಲ. ಆತನ ಮುದ್ದಿನ ಮಗಳು ಸುಹಾಸಿನಿ. ಸ್ವಲ್ಪ ಹೊತ್ತು ರಾಜನು ಇದನ್ನು ಕನಸೆಂದು ಭಾವಿಸಿದ. ಆದರೆ ಸುಹಾಸಿನಿ ಹಾಸಿಗೆಯ ಮೇಲೆ ಕುಳಿತು, ತಂದೆಯ ಎದೆಯ ಮೇಲೆ ಹಾರಿ ನೆಗೆದಾಡುತ್ತಾ ಚೇಷ್ಟೆ ಮಾಡುತ್ತಾ "ಅಪ್ಪಾ, ಅಪ್ಪಾ" ಎಂದು ಕರೆಯುತ್ತಿರಲು, ರಾಜನು ಇದು ಕನಸಲ್ಲವೆಂದೂ ಯಥಾರ್ಥವೇ ಎಂದು ನಿಶ್ಚಯಿಸಿದನು. ತನ್ನ ಕಣ್ಣ ಮುಂದೆ ತನ್ನ ಮಗಳು ಸುಹಾಸಿನಿ ಚೇಷ್ಟೆ ಮಾಡುತ್ತಿದ್ದರೆ ಹೇಗೆ ತಾನೇ ನಂಬದಿರುವನು? ಮನುಷಿಯ ಮಾತುಗಳಿಂದ ತನ್ನನ್ನು ಕರೆಯುತ್ತಿರುವುದು ಸ್ಪಷ್ಟವಾಗಿ ಕೇಳಿಸುತ್ತಿರುವಲ್ಲಿ ಇದು ಕನಸೆಂದು ಹೇಗೆ ತಾನೇ ತಿಳಿಯುವನು? ರಾಜನು ಕೂಡಲೇ ಪ್ರಜ್ಞೆ ತಂದುಕೊಂಡೆದ್ದು ಸುಹಾಸಿನಿಯನ್ನು ಎದೆಗೆ ಅಪ್ಪಿಕೊಂಡು "ಇದೇನಿದು ತಾಯಿ, ಈ ಅರ್ಧರಾತ್ರಿ ವೇಳೆಯಲ್ಲಿ ನೀನು ಹೇಗೆ ಬಂದೆಯಮ್ಮಾ? ಎಲ್ಲಿ ನಮ್ಮ ದಾಸಿಯರು? ಪರಿವಾರವೆಲ್ಲಾ ಎಲ್ಲಿ? ನೌಕರರು ಏನಾದರು? ಇಷ್ಟು ಜನಗಳನ್ನು ತೊರೆದು ನೀನೊಬ್ಬಳೇ ಹೇಗೆ ಬಂದೆ ಮಗು? ಬಹಳ ಆಶ್ಚರ್ಯವಾಗಿದೆ?" ಎಂದು ಒಂದು ಕಡೆ ಆಶ್ಚರ್ಯದಿಂದಲೂ, ಮತ್ತೊಂದು ಕಡೆ ಆನಂದದಿಂದಲೂ ನೂರಾರು ಪ್ರಶ್ನೆಗಳನ್ನು ಕೇಳಿದನು.

ಸುಹಾಸಿನಿ ಸ್ವಲ್ಪ ಸಮಯ ಸುಮ್ಮನಿದ್ದಳು. ತಂದೆಯ ಕೈ ಹಿಡಿದುಕೊಂಡು ಮಂಚದಿಂದ ಇಳಿಯುವಂತೆ ಸನ್ನೆ ಮಾಡಿ, ತರುವಾಯ ಆ ಕೊಠಡಿಯಲ್ಲಿದ್ದ ಒಂದು ದೊಡ್ಡ ಪಟದ ಹತ್ತಿರಕ್ಕೆ ಕರೆದುಕೊಂಡು ಹೋಗಿ "ಅದೋ ಆ ಪಟ ನೋಡಿದೆಯಾ?" ಎಂದು ಕೇಳಿದಳು. ರಾಜನಿಗೇನೂ ಅರ್ಥವಾಗಲಿಲ್ಲ.

"ನೀನು ಇಲ್ಲಿಗೆ ಹೇಗೆ ಬಂದೆಯಮ್ಮಾ ಎಂದು ಕೇಳಿದರೆ ಪಟ ತೋರಿಸುತ್ತಿರುವೆಯಲ್ಲಾ ತಾಯಿ? ಆ ಪಟ ನಿನಗೆ ಬೇಕೇನು? ಅದಲ್ಲ, ಅದಕ್ಕಿಂತಲೂ ಭಾರಿ ಭಾರಿ ಪಟಗಳನ್ನು, ಒಳ್ಳೊಳ್ಳೆ ಪಟಗಳನ್ನು ಬೇಕಾದಷ್ಟು ತರಿಸಿಕೊಡುತ್ತೇನೆ. ಮೊದಲು ನೀನು ಇಲ್ಲಿಗೆ





ಹೇಗೆ ಬಂದೆಯೋ ಹೇಳು ತಾಯಿ" ಎಂದು ಮಗಳನ್ನು ಕೇಳಿದ.

ಆಗ ಸುಹಾಸಿನಿ "ಅದೇ ಅಪ್ಪಾ, ಅದೇ ಆ ಪಟದಿಂದಲೇ ಬಂದೆ" ಎಂದಳು ಪಾಪ ಮುಗ್ಧಳಾಗಿ.

ಪಟದಿಂದ ಬರುವುದೆಂದರೇನು? ಎಂದು ರಾಜ ಸ್ವಲ್ಪ ಹೊತ್ತು ಯೋಚನೆಮಾಡಿ ಕಡೆಗೆ ಆ ಪಟವನ್ನು ಬದಿಗೊತ್ತಿ ನೋಡಿದ. ಆ ಪಟವನ್ನು ಸ್ವಲ್ಪ ಸರಿಸಿದ ಕೂಡಲೇ ಕಂಡ ದೃಶ್ಯವನ್ನು ನೋಡಿ, ರಾಜನು ದಿಗ್ಭ್ರಮೆಗೊಂಡು ಶಿಲೆಯಂತೆ ನಿಂತುಬಿಟ್ಟನು. ಏಕೆಂದರೆ ಆ ಪಠವನ್ನು ಸರಿಸಿದ ಸ್ಥಳದಲ್ಲಿ ಒಂದು ದೊಡ್ಡ ದ್ವಾರ ಕಾಣಿಸಿತು. ರಾಜನು ಮಗಳನ್ನು ಸಂಗಡ ಕರೆದುಕೊಂಡು ಆ ದ್ವಾರದ ಮುಖಾಂತರ ಒಳಗೆ ಹೋದ. ಹಾಗೆ ಸ್ವಲ್ಪದೂರ ಸಾಗುವಲ್ಲಿ ಅದು ಒಂದು ಸುರಂಗವೆಂದು ರಾಜನು ಅರಿತುಕೊಂಡನು. ಅದರಿಂದ ಮಗುವನ್ನು ನಡಿಸಲು ಇಷ್ಟಪಡದೆ ಎತ್ತಿಕೊಂಡು ಜಾಗರೂಕತೆಯಿಂದ ಅಡಿಗಳಿಡುತ್ತಾ ಮುಂದುವರಿದನು.

ಸುರಂಗದಲ್ಲಿ ಅರ್ಧದೂರ ಹೋಗುವಷ್ಟರಲ್ಲಿ ಸುಹಾಸಿನಿಯನ್ನು ನೋಡಿಕೊಳ್ಳುತ್ತಿದ್ದ ದಾದಿ ಎದುರಾಗಿ ಬಂದಳು. ಸುಹಾಸಿನಿ ಕೋಣೆಯಿಂದ ಮಾಯವಾಗುವಾಗ ಆ



ದಾದಿ ನಿದ್ರೆ ಮಾಡುತ್ತಿದ್ದಳು. ಆದರೆ ಮರು ಕ್ಷಣವೇ ಎಚ್ಚರವಾಗಿ ನೋಡಲು ಹಾಸಿಗೆಯ ಮೇಲೆ ಸುಹಾಸಿನಿ ಕಾಣಬರಲಿಲ್ಲ. ಅದಕ್ಕೆ ತಕ್ಕ ಹಾಗೆ ಗೋಡೆಯಲ್ಲಿ ಅವರೆವಿಗೂ ಕನ್ನಡಿಯಿದ್ದ ಸ್ಥಳದಲ್ಲಿ ಒಂದು ದ್ವಾರವಿರುವುದನ್ನು ಕಂಡು ದಾದಿ ತಳಮಳಗೊಂಡಳು. ಆಕೆ ಮಗುವನ್ನು ಹುಡುಕುತ್ತಾ ತನಗೆ ಅರಿವಿಲ್ಲದೆಯೇ ಆ ಸುರಂಗದಲ್ಲಿ ಪ್ರವೇಶಿಸಿದಳು. ಮಗುವನ್ನು ಎತ್ತಿಕೊಂಡು ಬರುತ್ತಿದ್ದ ರಾಜನನ್ನು ಕಂಡು ಆಕೆಗೆ ಸ್ವಲ್ಪ ಜೀವ ಬಂದಂತಾಯಿತು. ಮೂವರೂ ಒಟ್ಟಿಗೆ ಸುರಂಗದ ಕೊನೆಯನ್ನು ಸೇರುವಲ್ಲಿ ಅದಕ್ಕೆ ಮೊದಲು ಅಲ್ಲಿ ಸುಹಾಸಿನಿಯ ಕೋಣೆಗೆ ದಾರಿ ತೋರಿಸಿದ ದ್ವಾರ ಕಾಣಿಸದಾಯಿತು. ರಾಜ ಮತ್ತು ದಾದಿ ಸಹ ಬೆದರಿದರು. ಒಂದು ವೇಳೆ ಸುರಂಗದಲ್ಲಿ ದಾರಿ ತಪ್ಪಿ ಬಂದೆವೇನೋ ಎಂದು ಅನುಮಾನ ಬಂತು. ರಾಜನು ತಕ್ಷಣವೇ ಸುಹಾಸಿನಿ ಮತ್ತು ದಾದಿಯನ್ನೂ ಅಲ್ಲೆ ಇರುವಂತೆ ಹೇಳಿ, ಮತ್ತೆ ತಾನು ಬಂದ ದಾರಿಯಲ್ಲೇ ಸುರಂಗದ ಕಡೆಯವರೆವಿಗೂ ಹಿಂತಿರುಗಿದನು. ಎಷ್ಟು ದೂರ ಹೋದರೂ ಒಂದು ಮಾರ್ಗವೇ ಹೊರತು ಎರಡು ದಾರಿ ಕಾಣಿಸಲಿಲ್ಲ. ಸುರಂಗ ಹೋಗಿ ಹೋಗಿ ಮತ್ತೆ ರಾಜನ ಶಯನಾಗಾರಕ್ಕೆ ದಾರಿ ತೆರೆಯಿತು. ಅದರಿಂದ ರಾಜನು ಮತ್ತಷ್ಟು ಭಯಗೊಂಡನು. "ಏನು ಮಾಡಲಿ? ಎಂದು ಆಲೋಚಿಸುತ್ತಾ ದಾದಿಯನ್ನು ಇರುವಂತೆ ಹೇಳಿದ್ದ ಜಾಗಕ್ಕೆ ಮತ್ತೆ ಬಂದ. ಆದರೇನಿದು ವಿಚಿತ್ರ! ಒಂದು ಕ್ಷಣದ ಹಿಂದೆ ಅಲ್ಲಿ ತಾನು ಬಿಟ್ಟು ಹೋಗಿದ್ದ ದಾದಿ ಮತ್ತು ಮಗು ಸಹ ಮಾಯವಾಗಿದ್ದಾರೆ!! ಇದನ್ನು ಕಂಡು ರಾಜನಿಗೆ ಹುಚ್ಚು ಹಿಡಿದಂತಾಯಿತು. ಏನೂ ದಿಕ್ಕು ತೋರದೆ ಹಾಗೇ ಆ ಸುರಂಗದಲ್ಲೇ ಶತಪಥ ತಿರುಗಾಡಲು ಮೊದಲು ಮಾಡಿದನು.

[ರಾಜನ ಅನುಮಾನಕ್ಕೆ ಸರಿಯಾಗಿ ಹೆಜ್ಜೆ ಹೆಜ್ಜೆಗೆ ಈ ಅವಾಂತರಗಳೇನು? ಸುಹಾಸಿನಿಯು ಮತ್ತು ಆಕೆಯೊಂದಿಗಿದ್ದ ದಾದಿಯ ವಿಷಯವೇನು? ರಾಜನು ಅವರ ಸುಳುವು ಕಂಡುಹಿಡಿದನೇ, ಎಂಬುದನ್ನು ಮುಂದಿನ ತಿಂಗಳು ಓದಿ]






ಒಂದಾನೊಂದು ಕಾಲದಲ್ಲಿ ತಂಜಾವೂರನ್ನು ರಘುನಾಥರಾಯನು ಪಾಲಿಸುತ್ತಿದ್ದನು. ಆತನಿಗೆ ಸಂಗೀತವೆಂದರೆ ಪ್ರಾಣ. ಎಲ್ಲ ದೇಶಗಳ ಸಂಗೀತ ವಿದ್ವಾಂಸರನ್ನೂ ಬರ ಮಾಡಿಕೊಂಡು, ಸಂಗೀತ ಕಛೇರಿ ಮಾಡಿಸಿ, ಅನೇಕ ಬೆಲೆಬಾಳುವ ಬಹುಮಾನಗಳನ್ನು ಕೊಟ್ಟು ಸತ್ಕರಿಸುತ್ತಿದ್ದನು. ಅಷ್ಟೇ ಅಲ್ಲ, ಅನೇಕರನ್ನು ರಾಜಮರ್ಯಾದೆ ಭೂಮಿ ಕಾಣಿಕೆಗಳನ್ನು ಕೊಟ್ಟು ತನ್ನ ಆಶ್ರಯದಲ್ಲಿ ಆಸ್ಥಾನ ವಿದ್ವಾಂಸರನ್ನಾಗಿ ಇಟ್ಟುಕೊಳ್ಳುತ್ತಿದ್ದನು.

ಆಸ್ಥಾನದಲ್ಲಿದ್ದವರೆಲ್ಲರೂ ಮಹಾ ಮಹಾ ವಿದ್ವಾಂಸರೇ ಆಗಿದ್ದರೂ ಅವರೆಲ್ಲರಲ್ಲಿ ಬಹು ಮುಖ್ಯಳೆಂದರೆ ಗಾಯಕಿ ಕಾಮಾಕ್ಷಿ. ಕಾಮಾಕ್ಷಿ ಸ್ವರ ಎತ್ತಿದರೆ ಸಾಕು, ಅಳುವ ಮಕ್ಕಳು ಸುಮ್ಮನಾಗುವರು. ದನಕರುಗಳು ಮೇಯುವುದನ್ನು ಬಿಟ್ಟು ಸುಮ್ಮನೆ ನಿಂತು ಬಿಡುವುವು. ಹುತ್ತದಿಂದ ಹಾವು ಹೊರಗೆ ಬಂದು ಹೆಡೆಯೆತ್ತಿ ನಾಟ್ಯವಾಡುವುದು. ಕಾಮಾಕ್ಷಿಯ ಸಂಗೀತ ಅಷ್ಟು ಮೃದು ಮಧುರ. ಅಂತಹ ವಿದ್ವಾಂಸಳು ತನ್ನ ಆಸ್ಥಾನದಲ್ಲಿರುವುದು ರಘುನಾಥ ರಾಯನಿಗೆ ಬಹಳ ಹೆಮ್ಮೆಯಾಗಿತ್ತು. ಆತನು ಆಕೆಗೆ 'ಮಧುರವಾಣಿ' 'ವಸಂತಕೋಕಿಲೆ' ಎಂದು ಮುಂತಾದ ಬಿರುದುಗಳನ್ನೆಷ್ಟೋ ದಯಪಾಲಿಸಿದ್ದನು. ಕಾಣಿಕೆ ಬಹುಮಾನಾದಿಗಳ ಮಾತು ಬೇರೆ ಹೇಳಬೇಕಾಗಿಲ್ಲ.

ಕಾಮಾಕ್ಷಿ ಪ್ರಸಿದ್ಧ ಗಾಯಕಳೇ ಹೊರತು ಸುಂದರಿ ಅಲ್ಲ. ಕುರೂಪಿ ಎಂತಲೇ ಹೇಳಬೇಕು. ಆದರೇನು! ಆಕೆಯ ಸಂಗೀತ ಕೇಳಲು ಬಂದವರು ಗಾನ ಮಾಧುರ್ಯದಲ್ಲಿ ತೇಲಿಹೋಗುತ್ತಿದ್ದರೇ ಹೊರತು ಅವರಿಗೆ ಆಕೆಯ ಸೌಂದರ್ಯದ ಮಾತು ಏಕೆ?

ಹೀಗಿರುವಲ್ಲಿ ಒಂದು ಸಾರಿ ರಾಯನ ಮಿತ್ರನಾದ ಹೈದರಾಬಾದಿನ ನವಾಬನು ಪರಿವಾರ ಸಮೇತ ನೋಡಲು ಬರುತ್ತಿರುವನೆಂಬ ಸುದ್ದಿ ಬಂತು. ರಾಯನು ಪರಮಾನಂದಭರಿತನಾದನು. ಅಪೂರ್ವವಾದ ನೋಟ ವಿನೋದಗಳನ್ನು, ಏರ್ಪಾಡು ಮಾಡಿದನು. ನಗರ ಮತ್ತು ಅರಮನೆಯನ್ನು ಸೊಗುಸಾಗಿ ಸಿಂಗರಿಸಲಾಗಿತ್ತು. ನವಾಬನು

ಎಂ. ಟಿ. ಜಾನಕಮ್ಮ, ಬೆಂಗಳೂರು






ನಗರದ ಹೆಬ್ಬಾಗಿಲಿನ ಹತ್ತಿರ ಬಂದ ಕೂಡಲೇ ರಾಯನು ಸಪರಿವಾರವಾಗಿ ಎದುರುಗೊಂಡು, ಸ್ವಾಗತವಿತ್ತು ಅರಮನೆಗೆ ಕರೆದುಕೊಂಡು ಬಂದನು.

ಈ ಸಂದರ್ಭದಲ್ಲಿ ನಡೆದ ಸಂಗೀತ ಕಛೇರಿಯಲ್ಲಿ ಕಾಮಾಕ್ಷಿ ಬಹಳ ಇಂಪಾಗಿ ಹಾಡಿದಳು. 'ಅಚ್ಛಾ, ಅಚ್ಛಾ' ಎಂದು ನವಾಬನು ಪದೇ ಪದೇ ಮೆಚ್ಚಿಕೊಂಡು, ಸ್ವತಃ ಎದ್ದು ಬಂದು ತನ್ನ ಕೊರಳಲ್ಲಿದ್ದ ಮುತ್ತಿನ ಸರವನ್ನು ತೆಗೆದು ಕಾಮಾಕ್ಷಿಗೆ ಬಹುಮಾನವಾಗಿ ಕೊಟ್ಟನು. ನವಾಬನ ಎಡಗಾಲು ಸ್ವಲ್ಪ ಸೊಟ್ಟಗಿದ್ದದರಿಂದ ಆತನು ಸಭೆಯಲ್ಲಿ ಕುಂಟುತ್ತಾ ನಡೆಯಬೇಕಾಯಿತು. ಅದನ್ನು ಗಮನಿಸಿದ ಸಭಿಕರು "ಅಯ್ಯೋ, ಇಂತಹ ಗುಣಾಢ್ಯನಾದ ನವಾಬನಿಗೇಕೆ ಕಾಲು ಕುಂಟಾಗಿದೆಯೋ, ಪಾಪ" ಎಂದು ಮನದಲ್ಲಿ ತಮ್ಮ ತಮ್ಮ ಸಹಾನುಭೂತಿ ವ್ಯಕ್ತ ಪಡಿಸಿದರು. ಆದರೆ ಆ ಸಹಾನುಭೂತಿ ಎಲ್ಲವೂ ಮರುಕ್ಷಣದಲ್ಲೇ ಮಾಯವಾಯಿತು. ಏಕೆಂದರೆ ನವಾಬ ಹಾರ ಕೊಟ್ಟು ಸ್ವಸ್ಥವಾಗಿ ಹಿಂದಕ್ಕೆ ಬರದೆ ಅಲ್ಲೇ ನಿಂತು ಆಕೆಯನ್ನೇನೋ ಕೆಣಕಿ ಮಾತನಾಡಿಸಿದ. ಕಾಮಾಕ್ಷಿ ಸುಂದರಿಯಲ್ಲವೆಂದು ಎಲ್ಲರಿಗೂ ತಿಳಿದ ವಿಷಯವೇ. ನವಾಬನು ಆಕೆಯ ಹತ್ತಿರ ಹೋದಾಗ ಕಾಮಾಕ್ಷಿಯ ಕುರೂಪು ಸ್ಪಷ್ಟವಾಗಿ ಆತನಿಗೆ ಕಾಣಿಸಿತು. ನವಾಬನು ನಗುತ್ತಾ 'ಕಾಮಾಚ್ಚಿ, ನಿಂದೂ ಶರಸ್ವಾತಿ ಐತೆಲ್ಲಾ ಅದು ಭಾಳಾ ಕುರುಡು" ಎಂದು ಹಾಸ್ಯ ಚಟಾಕಿ ಹಾರಿಸಿದ.

'ಏಕೆ ಪ್ರಭೂ, ಸರಸ್ವತಿ ದೇವಿ ಅಂಥಳೆಂದು ಅಪ್ಪಣೆ ಕೊಡಿಸುತ್ತಿರುವಿರಿ?' ಎಂದು ಕೇಳಿದಳು ಕಾಮಾಕ್ಷಿ.

ಅದಕ್ಕೆ ನವಾಬ 'ಹೇನೂಂತಿಯಾ? ಅದು ಕುರುಡೂ ಅಲ್ಲಾಂದ್ರೇ ನಿನ್ನಂಥಾ ಕುರೂಪೀ ನಾಲಿಗೇಲಿ ಹೆಂಗೆ ಸೇರ್ಕೊಂತಾ ಇದ್ಲು? ನಿಂದೂ ಮುಖಾ ನೋಡ್ತಾ ಇದ್ದರೆ ವಾಂತಿ ಬರ್ತಾದೆ. ಅಂತಾದೂ ಐತೇ ನಿಂದೂ ಮುಖಾ. ಆದ್ರೂನೂ ಶರಸ್ವಾತಿ ನಿಂದೂ ಬಾಯ್ಲಿ ಪಸಂದಾಗಿ ಹಾಡಿಸ್ತಾಳೆ ಅಲ್ಲಾ!' ಎಂದನು.

ಕಾಮಾಕ್ಷಿಗೆ ನವಾಬನ ಅಪಹಾಸ್ಯ ಅರ್ಥವಾಯಿತು. 'ವಿದ್ಯಾದೇವತೆ ಸರಸ್ವತಿ ಅಂಥ





ಳಾದುದರಿಂದಲೇ ನೀನಿಷ್ಟು ಕುರೂಪಿ ಎಂದು ತಿಳಿಯದೆ ನಿನ್ನನ್ನು ಆಶ್ರಯಿಸಿ, ನಿನ್ನಿಂದ ಇಷ್ಟು ಸೊಗುಸಾಗಿ ಹಾಡಿಸುತ್ತಿದ್ದಾಳೆ' ಎಂದು ಆತನ ಮಾತಿನ ಅರ್ಥ. ಆ ಮಾತಿನಲ್ಲಿ 'ಕಾಮಾಕ್ಷಿ, ನೀನು ಸೊಗುಸಾಗಿ ಹಾಡುವೆ' ಎಂಬ ಹೊಗಳಿಕೆಯೂ ಇದೆ; 'ನೀನು ಕುರೂಪಿ' ಎಂಬ ತೆಗಳಿಕೆಯೂ ಇದೆ. ಯಾರೇ ಆದರೂ ಮೆಚ್ಚಿಕೊಂಡರೆ ಸಂತೋಷ ಪಡುವರೇ ಹೊರತು, ತೆಗಳಿದರೆ ಯಾರು ಸುಮ್ಮನಿರುತ್ತಾರೆ? ತಮ್ಮ ಅಭಿಮಾನ ಗಾಯಕಳನ್ನು ನವಾಬನು ಈ ರೀತಿ ಅವಮಾನ ಮಾಡಿದನಲ್ಲಾ ಎಂದು ಸಭಿಕರಿಗೆ ಕೋಪ ಬಂತು. ಬಂದರೇನು ತಾನೇ ಮಾಡಬಲ್ಲರು? ಆತ ಅಂತ ಇಂತಹ ಮನುಷ್ಯನಲ್ಲ. ಹೈದರಾಬಾದನ್ನು ಆಳುವ ನವಾಬನಲ್ಲವೆ? ಖಜಾನೆಯಲ್ಲಿರುವ ಕೋಟ್ಯಾಂತರ ರೂಪಾಯಿಗಳ ಒಡೆಯ! ಅದರಿಂದ ಅವರೆಲ್ಲರೂ ಕೋಪವನ್ನು ನುಂಗಿಕೊಂಡು ತಮ್ಮ ಪಾಡಿಗೆ ಸುಮ್ಮನಿದ್ದರು.

ಆದರೆ ಕಾಮಾಕ್ಷಿ ಸುಮ್ಮನಿರಲಿಲ್ಲ. 'ನಾಯಿ ಕಡಿತಕ್ಕೆ ಕೆರದ ಬಡಿತ' ವೆಂಬಂತೆ ನವಾಬನಿಗೆ ಸರಿಯಾದ ಬದುಲು ಕೊಟ್ಟಳು. ಅಂದ ವೇನೂ ಇಲ್ಲವೆಂದರೆ ಗಡಸುತನ ಮತ್ತು ಸ್ವಾಭಿಮಾನಕ್ಕೇನು ಕೊರತೆ ಕಾಮಾಕ್ಷಿಗೆ?

'ಪ್ರಭೂ ಸರಸ್ವತಿಯನ್ನು ಮಾತ್ರ ಏಕೆ ಬೈತೀರಿ? ಆಕೆಯ ಅತ್ತೆಯಾದ ಲಕ್ಷ್ಮಿದೇವಿ



ಯೂ ಅಂಥಳೇ?" ಎಂದಳು ಕಾಮಾಕ್ಷಿ.

"ಹೇನೂ? ಲಕ್ಸುಮಿನೂಕೂಡಾ ಕುರುಡೇ?" ಎಂದು ಉಗ್ರನಾದ ನವಾಬ.

"ಅದು ನಿಜವೇ ಪ್ರಭೂ. ಅಲ್ಲದಿದ್ದರೆ ತಮ್ಮಂತಹ ಕುಂಟರನ್ನು ಆಶ್ರಯಿಸಿ ಇಷ್ಟೊಂದು ಐಶ್ವರ್ಯ ಕೊಡುವುದೆಂದರೇನು? ಕುರುಡಳಾದುದರಿಂದಲೇ ಪ್ರಭುಗಳ ಸೊಟ್ಟಕಾಲು ಆಕೆಯ ಗಮನಕ್ಕೆ ಬಂದಿರಲಾರದು" ಎಂದು ನಿರ್ಭಯವಾಗಿ ನುಡಿದಳು.

ಈ ಚುಚ್ಚುಮಾತು ಕೇಳಿ ನವಾಬನಿಗೆ ತುಂಬಾ ರೋಷವುಂಟಾಯಿತು. ಆದರೇನು ಮಾಡಬಲ್ಲ? ತಪ್ಪು ತನ್ನದೇ ಆದುದರಿಂದ ಬಾಯಿ ಮುಚ್ಚಿಕೊಂಡು ಸುಮ್ಮನೆ ಹಿಂತಿರುಗಿದ, ನವಾಬ.




ಪೂರ್ವದಲ್ಲಿ ತ್ವಷ್ಟಪ್ರಜಾಪತಿ ಎಂಬ ಒಬ್ಬ ಮಹಾ ವಿಶ್ವಕರ್ಮನಿದ್ದನು ಆತನು ದೇವತೆಗಳಿಗೆ ವಿಮಾನ, ಆಯುಧ ಇತ್ಯಾದಿಗಳನ್ನು ಮಾಡಿ ಕೊಡುತ್ತಿದ್ದನು.

ವಿಶ್ವಕರ್ಮನಿಗೆ ಸಂಧ್ಯಾದೇವಿ ಎಂಬ ಸುಂದರಳಾದ ಮಗಳಿದ್ದಳು. ಆಕೆ ಸುಮ ಕೋಮಲೆ. ಸಂಧ್ಯೆಗೆ ಮದುವೆಯ ವಯಸ್ಸು ಪ್ರಾಪ್ತವಾದಕೂಡಲೇ ಸೂರ್ಯನು ಆಕೆಯನ್ನು ಪ್ರೇಮಿಸಿದನೆಂದು ತಿಳಿದ ಇತರ ದೇವತೆಗಳು ಯಾರೂ ಪೈಪೋಟಿ ಮಾಡದೆ ಸುಮ್ಮನಿದ್ದುಬಿಟ್ಟರು. ಸೂರ್ಯನು ಲೋಕಗಳೆಲ್ಲವನ್ನೂ ನಿತ್ಯ ಸುತ್ತಿಕೊಂಡು ಬರುತ್ತಿದ್ದನಾದುದರಿಂದ ವಿವಾಹಕ್ಕೆ ಪ್ರಾಪ್ತವಾಗಿರುವ ಹೆಣ್ಣು ಮಕ್ಕಳ ವಿಷಯ ಆತನಿಗೆ ತಿಳಿಯುತಿತ್ತು. ಅವರೆಲ್ಲರಿಗಿಂತ ಸಂಧ್ಯಾದೇವಿ ಸುಂದರಳೆಂದು ತೋರಿ, ಆಕೆಯನ್ನೇ ವಿವಾಹವಾಗಬೇಕೆಂದು ನಿರ್ಧರಿಸಿದನು. ಸೂರ್ಯಭಗವಾನನ ಹಿರಿಮೆ ತಿಳಿದ ವಿಶ್ವಕರ್ಮನು ಒಂದು ಸುಮುಹೂರ್ತದಲ್ಲಿ ಸಂಧ್ಯಾದೇವಿಯನ್ನು ಸೂರ್ಯನಿಗೆ ಕೊಟ್ಟು ವಿವಾಹ ಮಾಡಿದನು.

ಈ ಮಹಾ ಪುರುಷನನ್ನು ಮದುವೆಯಾದುದಕ್ಕೆ ಸಂಧ್ಯಾದೇವಿ ಪ್ರಾರಂಭದಲ್ಲಿ ಉಲ್ಲಾಸದಿಂದ ಇದ್ದುದೇನೋ ವಾಸ್ತವ. ಆದರೆ ಅತ್ತೆಯ ಮನೆಗೆ ಹೋದ ಕೂಡಲೇ ಆ ಉಲ್ಲಾಸವೆಲ್ಲಾ ತಣ್ಣಗಾಯಿತು. ಸೂರ್ಯನು ಲೋಕಬಾಂಧವನೇ ಇರಬಹುದು. ಆದರೆ ಆ ಧಗಧಗನೆಂದು ಉರಿಯುವ ಗಂಡನೊಂದಿಗೆ ಹೇಗೆ ಸಂಸಾರ ಮಾಡುವುದು? ಅದರಲ್ಲಿಯೂ ಸಂಧ್ಯಾದೇವಿಯಂತಹ ಸುಕುಮಾರಿ ಏನು ಮಾಡಲಾಪಳು? "ಸ್ವಾಮಿ, ನೀವು ತುಂಬಾ ಶಾಖದಿಂದ ಪ್ರಜ್ವಲಿಸುತ್ತಿರುವಿರಿ. ನಿಮ್ಮೊಂದಿಗೆ ಇರುವುದು ನನಗೆ ಬಹು ಕಷ್ಟವಾಗಿದೆ' ಎಂದು ತನ್ನ ಬಾಧೆಯನ್ನು ಗಂಡನೊಂದಿಗೆ ವಿವರಿಸಬೇಕೆಂದು ಆಕೆ ಆಗಾಗ ಭಾವಿಸಿಕೊಳ್ಳುವಳು. ಆದರೆ ಪತಿಯು ಏನೆಂದು ತಿಳಿಯುವನೋ ಎಂದು ಭಯಪಟ್ಟು ಮನಸ್ಸಿನಲ್ಲಿರುವುದನ್ನು ಹೇಳದೆ ಸುಮ್ಮನಿದ್ದು ಬಿಡುತ್ತಿದ್ದಳು.

ಕಾಲಕ್ರಮೇಣ ಆಕೆಗೆ ವೈವಸ್ವತ, ಯಮ ಎಂಬ ಇಬ್ಬರು ಕುಮಾರರೂ,

ಪಿ. ವಿ. ರಾಮಚಂದ್ರಮೂರ್ತಿ, ಮದರಾಸು.




ಯಮುನೆ ಎಂಬ ಕುಮಾರಿಯೂ ಜನಿಸಿದರು. ಕ್ರಮೇಣ ಸೂರ್ಯನ ತೀಕ್ಷ್ಣತೆ ಕಡಿಮೆಯಾಗುವ ಬದಲು ದಿನದಿನಕ್ಕೆ ವಿಪರೀತವಾಗಿ ಸಂಧ್ಯಾದೇವಿಗೆ ಸಹ ದುಸ್ಸಾಧ್ಯವಾದ ಬಾಧೆ ಕೊಟ್ಟಿತು. ಒಂದುದಿನ ಆಕೆ ತನ್ನ ಬಾಧೆಯನ್ನು ಯಾರೊಂದಿಗೂ ಹೇಳಿಕೊಳ್ಳಲಾರದೆ ಏಕಾಕಿಯಾಗಿ ಕುಳಿತುಕೊಂಡು ದುಃಖಿಸುತ್ತಿದ್ದಳು. ಆಗ ಆಕೆಯ ನೆರಳು ಪಕ್ಕದಲ್ಲಿ ಕಾಣಿಸಿತು. ಆ ನೆರಳು ತನ್ನಂತೆಯೇ ಕಾಣಬರಲು ಸಂಧ್ಯೆಗೆ ಒಂದು ಯೋಚನೆ ಹೊಳೆಯಿತು. ಆ ತನ್ನ ನೆರಳಿಗೆ ಪ್ರಾಣ ಕೊಟ್ಟರೆ ತನ್ನಂತೆಯೇ ಸುಂದರಿಯಾಗಿ ಕಾಣುವುದು. ತನ್ನ ಸ್ಥಾನದಲ್ಲಿ ಆಕೆಯನ್ನು ಸೂರ್ಯನಿಗೆ ಪತ್ನಿಯನ್ನಾಗಿ ಮಾಡಿ, ತಾನು ತೌರು ಮನೆಗೆಹೋಗಿ ಈ ವರೆವಿಗೂ ಸೂರ್ಯನ ತಾಪದಿಂದ ಕಂದಿಹೋಗಿದ್ದ ತನ್ನ ಶರೀರ ಪೂರ್ವಾರೋಗ್ಯ ಪಡೆಯುವವರೆವಿಗೂ ಅಲ್ಲಿ ವಿಶ್ರಾಂತಿ ಹೊಂದಿ ಆ ಬಳಿಕ ಬಂದುಬಿಡಬಹುದು ಎಂದು.

ಕೂಡಲೇ ಸಂಧ್ಯಾದೇವಿ ತನ್ನ ನೆರಳಿಗೆ ಜೀವ ತುಂಬಿ, ಎಲ್ಲವಿಧದಲ್ಲೂ ತನ್ನಂತೆಯೇ ಇದ್ದ ಆ ಸುಂದರಿಗೆ ಛಾಯಾದೇವಿ ಎಂದು ಹೆಸರಿಟ್ಟಳು. ಛಾಯ ಎಂದರೆ ನೆರಳು. ಪ್ರಾಣ ಬಂದೊಡನೆ ಛಾಯಾದೇವಿ "ಅಕ್ಕಾ ನನ್ನನ್ನು ಏಕೆ ಹುಟ್ಟಿಸಿದೆ?" ಎಂದು ಕೇಳಿದಳು. ಸಂಧ್ಯೆ ತನ್ನ ಬಾಧೆಗಳೆಲ್ಲವನ್ನೂ ಆಕೆಗೆ ಹೇಳಿ "ನೀನು ಪತಿಗೆ ಅನುಮಾನವುಂಟಾಗದಂತೆ ನಡೆದುಕೊಳ್ಳಬೇಕು. ಆತನಿಗೆ ಸಂದೇಹವುಂಟಾಗದಂತೆ ನನ್ನ ಮಕ್ಕಳನ್ನೂ ಸಹ ಇಲ್ಲೇ ಬಿಟ್ಟುತೆರಳುತ್ತಿರುವೆನು. ಅವರಿಗೂ ಸಹ ಯಾವವಿಧವಾದ ಸಂಶಯವೂ ಆಗದಂತೆ 'ಈಕೆ ನಮ್ಮ ಅಮ್ಮನೇ' ಎಂದು ನಂಬಿಕೆ ಬರುವಂತೆ ನೀನವರನ್ನು ಸಲಹ ಬೇಕು. ನಮ್ಮ ಈ ರಹಸ್ಯ ಯಾರಿಗೂ ತಿಳಿಯಕೂಡದು" ಎಂದು ಆಣೆ ಭಾಷೆಗಳನ್ನು ಪಡೆದು, ಮರುದಿನವೇ ಸಂಧ್ಯಾದೇವಿ ತೌರುಮನೆಗೆ ಹೋದಳು.

ಸಂಧ್ಯಾದೇವಿ ಒಬ್ಬಳೇ ಬಂದುದನ್ನು ಕಂಡು 'ಏನಿದು ಸಮಾಚಾರ' ಎಂದು ಅನ್ನಿಸಿತು ವಿಶ್ವಕರ್ಮನಿಗೆ. ಆಕೆಗಾದರೋ ಮನ ಬಿಚ್ಚಿ ಹೇಳಲು ಬಿಗುಮಾನ. ಬಹುಶಃ



ಗಂಡನೊಂದಿಗೆ ಏನೋ ವಾಜ್ಯವಾಗಿ ಈ ರೀತಿ ಬಂದಿರಬಹುದೆಂದೂ, ಕೆಲ ದಿನಗಳಾದ ತರುವಾಯ ಅಳಿಯನೇ ಬಂದು ಕರೆದುಕೊಂಡು ಹೋಗಬಹುದೆಂದೂ, ಆತನು ಬಾರದೆ ಇದ್ದರೆ ತಾವೇ ಕರೆದುಕೊಂಡು ಹೋಗಿ ಬಿಟ್ಟುಬರಬಹುದೆಂದೂ ನೆನೆಸಿದರು ಆಕೆಯ ತಾಯಿ ತಂದೆ.

ಆದರೆ ಅವರು ನೆನೆಸಿದಂತೆ ಸೂರ್ಯನು ಬರಲೇ ಇಲ್ಲ. ಏಕೆ ಬರುತ್ತಾನೆ? ಆತನಿಗೆ ಸಂಧ್ಯಾದೇವಿಯು ಬಾಧೆಯಾಗಲೀ, ಆಕೆ ತೌರುಮನೆಗೆ ಹೋದ ವಿಷಯವಾಗಲೀ ತಿಳಿದಿದ್ದರಲ್ಲವೇ ? ಛಾಯಾದೇವಿ ಸೂರ್ಯನಿಗೆ ಸ್ವಲ್ಪವೂ ಅನುಮಾನವುಂಟಾಗದಂತೆ ಸಂಧ್ಯಾದೇವಿಯಂತೆಯೇ ನಡೆದುಕೊಳ್ಳುತ್ತಿದ್ದಳು. ಮಕ್ಕಳನ್ನೂ ಸಹ ಸ್ವಂತ ತಾಯಿಯಂತೆ ಪ್ರೀತಿಯಿಂದ ಸಾಕಿ ಸಲುಹುತ್ತಿದ್ದಳು. ಹಾಗಿರುವಲ್ಲಿ ಅವರಿಗೆ ಅನುಮಾನ ಹೇಗೆ ಬರುತ್ತೆ ?

ಎಷ್ಟುದಿನವಾದರೂ ತನ್ನ ಅಳಿಯ ಬರದಿರುವುದನ್ನು ಕಂಡು, ವಿಶ್ವಕರ್ಮ ಇನ್ನು ಉಪೇಕ್ಷೆ ಮಾಡುವುದು ಉಚಿತವಲ್ಲವೆಂದು ಸಂಧ್ಯೆಯೊಂದಿಗೆ 'ತಾಯಿ, ಮರಕ್ಕೆ ಕಾಯಿ ಭಾರವಲ್ಲ. ನೀನೆಷ್ಟುದಿನವಿದ್ದರೂ ನಮಗೆ ಸಂತೋಷವೇ! ಆದರೆ ಗಂಡನೊಂದಿಗೆ ಸಂಸಾರ ಮಾಡುವ ಕಾಲದಲ್ಲಿ ತೌರುಮನೆಯಲ್ಲಿರುವುದು ಕ್ಷೇಮವಲ್ಲ' ಎಂದನು. ಆಗ ಸಂಧ್ಯಾದೇವಿ "ಅಪ್ಪಾ, ನೀವು ಹೇಳಿದ ಮಾತು ನಿಜ. ನಾನೊಬ್ಬಳೇ ಹೋಗಬಲ್ಲೆ. ನಿಮಗೇಕೆ ವೃಥಾ ತೊಂದರೆ" ಎಂದು ಕೂಡಲೇ ಹೊರಟಳು. ಆದರೆ ಸೂರ್ಯಭಗವಾನನ ತಾಪವನ್ನು ನೆನೆಸಿಕೊಂಡ ಕೂಡಲೇ ಆಕೆಯ ಹೃದಯ ತಲ್ಲಣಿಸಿತು. ಸೂರ್ಯಲೋಕಕ್ಕೆ ಹೊರಟ ಆಕೆ, ದಾರಿಯಲ್ಲೇ ಒಂದು ಅಡವಿಯಲ್ಲಿ ನಿಂತುಬಿಟ್ಟಳು. ತನ್ನಂತಹ ಸುಂದರ ಸ್ತ್ರೀ ಒಬ್ಬಂಟಿಗಳಾಗಿ ಅಡವಿಯಲ್ಲಿರುವುದು ಕ್ಷೇಮಕರವಲ್ಲವೆಂದು ತೋರಿ, ಆಕೆ ಮನುಜರೂಪವನ್ನು ತೊರೆದು ಒಂದು ಹೆಣ್ಣು ಕುದುರೆಯ ರೂಪ ಹೊಂದಿ ಅಲ್ಲಿಯೇ ಇದ್ದುಬಿಟ್ಟಳು. ವಿಶ್ವಕರ್ಮನಿಗೆ ಈ ಸಂಗತಿ ಏನೂ ತಿಳಿಯದು. ಆತನು ತನ್ನ ಮಗಳು ಸುಖವಾಗಿ ಅತ್ತೆ ಮನೆ ಸೇರಿಕೊಂಡಿರಬಹುದೆಂದುಕೊಂಡನು.



ಸೂರ್ಯನಿಗೆ ಈ ವಿಷಯವೇನೂ ತಿಳಿಯದೆ ಛಾಯಾದೇವಿಯನ್ನೇ ಸಂಧ್ಯಾದೇವಿಯೆಂದು ಭಾವಿಸಿ, ಆಕೆಯನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದನು. ಸಂಧ್ಯಾದೇವಿಯ ಮಕ್ಕಳಾದ ವೈವಸ್ವತ, ಯಮ ಮತ್ತು ಯಮುನೆಯರೂ ಸಹ ಆಕೆ 'ತಮ್ಮ ತಾಯಿಯೇ' ಎಂದುಕೊಂಡು, ತಾಯಿಯ ಮೇಲಿನ ಸದರ ಮತ್ತು ಗೌರವಗಳನ್ನು ತೋರುತ್ತಿದ್ದರು.

ಕಾಲಕ್ರಮೇಣ ಛಾಯಾದೇವಿಗೂ ಮಕ್ಕಳು ಜನಿಸಿದರು. ಸೌವರ್ಣ, ಶನಿ ಎಂಬ ಇಬ್ಬರು ಕುಮಾರರು; ತಪತಿ ಎಂಬ ಕುವರಿ. ಆದರೆ ತನಗೆ ಮಕ್ಕಳಾದಕೂಡಲೇ ಛಾಯಾದೇವಿಯ ನಡೆವಳಿಕೆಯಲ್ಲಿ ಬದಲಾವಣೆ ಉಂಟಾಯಿತು. ಆವರೆವಿಗೂ ತನ್ನ ಹೆತ್ತ ಮಕ್ಕಳಂತೆ ಸಲಹಿ ಬೆಳೆಸಿದ ಸಂಧ್ಯಾದೇವಿಯ ಮಕ್ಕಳೆಂದರೆ ಆಕೆಗಿದ್ದ ಪ್ರೇಮ ಮಾಯವಾಗಿ, ಅವರನ್ನು ಸವತಿಯ ಮಕ್ಕಳನ್ನು ಕಾಣುವಂತೆ ಉಪೇಕ್ಷೆಯಿಂದ ನೋಡಲು ಪ್ರಾರಂಭಿಸಿದಳು. ತಮ್ಮನ್ನು ಹೆತ್ತ ತಾಯಿಯೇ ಈ ರೀತಿ ಪಕ್ಷಪಾತ ದೃಷ್ಟಿಯಿಂದ ನೋಡುವುದನ್ನು ತಿಳಿದುಕೊಂಡ ಬಾಲಕ ಯಮನು ಕೋಪದಿಂದ ಕಿಡಿಕಿಡಿಯಾಗಿ ಒಂದುದಿನ ಛಾಯಾದೇವಿಯನ್ನು ಹೊಡೆಯಲುಸಿದ್ಧನಾದನು. ಛಾಯಾ ತಕ್ಷಣಹೋಗಿ ಸೂರ್ಯನಿಗೆ ಇದ್ದದ್ದೂ ಇಲ್ಲದ್ದೂ ಸೇರಿಸಿ ಫಿರ್ಯಾದು ಮಾಡಿದಳು.




ಆದರೆ ಸೂರ್ಯ ಗಡಿಬಿಡಿ ಆಸಾಮಿಯಲ್ಲ. 'ಯಮನು ಚಿಕ್ಕವನೇ ಆದರೂ ಧರ್ಮಪರಾಯಣ. ಆತನು ಈ ರೀತಿ ನಡೆಯಲು ಯಾವುದೋ ಒಂದು ಪ್ರಬಲ ಕಾರಣವಿರಲೇಬೇಕು. ಏನಿರಬಹುದು ?' ಎಂದು ಆತ ಆಲೋಚಿಸಿದ. ಮಗನನ್ನು ಕರೆದು ಕೇಳಿದ.

"ತಪತಿ ಜನಿಸಿದ ಮೊದಲುಗೊಂಡು ಅಮ್ಮ ನಮ್ಮನ್ನು ಸವತಿಯ ಮಕ್ಕಳಂತೆ ಕಡೆಗೆಣಿಸಿ ನೋಡುತ್ತಿರುವಳು.' ಎಂದು ಇದ್ದ ವಿಷಯ ತಿಳಿಸಿದ ಯಮ. ಸೂರ್ಯ ಆ ಮಾತುಗಳನ್ನು ಕೇಳಿ ಆಶ್ಚರ್ಯಚಕಿತನಾದನು. ಇದನ್ನು ಸೂರ್ಯನೇ ಒಂದುದಿನ ಗುಟ್ಟಾಗಿ ಪರೀಕ್ಷಿಸಿ ನೋಡಿದ. ಯಮನ ಮಾತು ನಿಜವೆಂದೆನಿಸಿತು. ಕೂಡಲೇ





ಛಾಯೆಯನ್ನು ಕರೆದು ಕೇಳಿದ. ಛಾಯೆ ಏನೇನೋ ಸಬೂಬು ಹೇಳಿ ತಪ್ಪಿಸಿಕೊಳ್ಳಲು ನೋಡಿದಳು. ಕೋಪದಿಂದ ಸೂರ್ಯ ಭಗ್ಗೆಂದು ಉರಿಯಲು ಛಾಯಾದೇವಿ ತತ್ತರಿಸಿ ತಾನು ಸಂಧ್ಯಾದೇವಿ ಅಲ್ಲವೆಂದೂ ಸಂಧ್ಯೆ ತೌರುಮನೆಗೆ ಹೋದಳೆಂದೂ ಯಥಾರ್ಥವನ್ನು ವಿವರಿಸಿಬಿಟ್ಟಳು.

ಇದನ್ನು ಕೇಳಿ ಸೂರ್ಯ ಬಹಳ ವ್ಯಾಕುಲಗೊಂಡು ತಕ್ಷಣ ವಿಶ್ವಕರ್ಮನ ಹತ್ತಿರ ಹೋಗಿ "ಸಂಧ್ಯೆ ಎಲ್ಲಿ?" ಎಂದು ಕೇಳಿದನು. ಆ ಮಾತು ಕೇಳಿ ವಿಶ್ವಕರ್ಮ ನಿಶ್ಚೇಷ್ಟಿತನಾದನು. "ನಿಮ್ಮ ಹತ್ತಿರ ಹೋಗುವೆನೆಂದು ಹೊರಟಳಲ್ಲಾ!" ಎಂದನು. ಸೂರ್ಯ ನಡೆದುದೆಲ್ಲವನ್ನೂ ಹೇಳಲು, ವಿಶ್ವಕರ್ಮ ಅಳಿಯನಿಗೆ ಸಮಾಧಾನಮಾಡಿ, ತನ್ನ ಯಂತ್ರ ಸಾಮಗ್ರಿಗಳನ್ನು ತಂದು ಸೂರ್ಯನನ್ನು ಕೈಯಲ್ಲಿ ಹಿಡಿದುಕೊಂಡು ಭಗಭಗನೆಂದು ಉರಿಯುವ ಚೂರುಗಳನ್ನು ಕಳಚಿಕೆಳಗೆ ಬೀಳುವಂತೆ ಸಾಣೆ ಹಿಡಿದುಬಿಟ್ಟನು. ಜ್ವಾಲೆಗಳ ಬದಲು ಕಾವು ಮತ್ತು ಕಾಂತಿಯುಳಿದು ಸೂರ್ಯ ನೋಡಲು ಬಹು ಸುಂದರವಾಗಿ ಕಾಣಿಸಿದ. ನಂತರ ಸೂರ್ಯ ಸಂಧ್ಯಾದೇವಿಯನ್ನು ಹುಡುಕುತ್ತಾ ಹೊರಟ. ಆಕೆ ತನ್ನ ಮಾನವನ್ನು ಕಾಪಾಡಿಕೊಳ್ಳುವ ಸಲುವಾಗಿ ಹೆಣ್ಣು ಕುದುರೆ ರೂಪ ತಾಳಿ ಅಡವಿಯಲ್ಲಿರುವುದನ್ನು ತಿಳಿದು, ತಾನೂ ಸಹ ಕುದುರೆಯ ರೂಪದಲ್ಲಿ ಅಲ್ಲಿಗೆ ಹೋದ.

ಸಂಧ್ಯಾದೇವಿಯು ಆಗ "ಪ್ರಭೂ ನೀವು ಮಾತ್ರ ನಿಮ್ಮ ಸೂರ್ಯನ ರೂಪವನ್ನು ಧರಿಸಬೇಡಿ. ನಿಮ್ಮ ದಾರುಣ ತಾಪ ನಾ ತಡೆಯಲಾರೆ' ಎಂದು ಆಕೆ ತನ್ನ ಮನಸ್ಸಿನಲ್ಲಿದ್ದ ಮಾತನ್ನು ಹೇಳಿಬಿಟ್ಟಳು. ಅವರು ಆ ರೀತಿ ಕೆಲ ಕಾಲ ಕುದುರೆಗಳ ರೂಪದಲ್ಲಿರಲು ಅವರಿಗೆ ಅಶ್ವನಿ ಕುಮಾರರು ಹುಟ್ಟಿದರು. ಈ ಅಶ್ವನಿ ಕುಮಾರರೇ ದೇವತೆಗಳಿಗೆ ವೈದ್ಯರಾದರು. ಆದರೆ ಸೂರ್ಯನೂ ಸಂಧ್ಯಾದೇವಿಯೂ ಅಡವಿಯಲ್ಲಿ ಅಶ್ವಗಳ ರೂಪದಲ್ಲಿ ಬಹಳ ಕಾಲವಿರಲು ಸಾಧ್ಯವಿಲ್ಲದಾಯಿತು. ಏಕೆಂದರೆ ಸೂರ್ಯನು ಇಲ್ಲದಿದ್ದರೆ ಪ್ರಪಂಚಕ್ಕೆ ಬೆಳಕು ಎಲ್ಲಿಂದ ಬರಬೇಕು? ಅದರಿಂದ ಸೂರ್ಯ ತನ್ನ ತಾಪ ಶಮನವಾದ ವಿಷಯ ಆಕೆಗೆ ತಿಳಿಸಿ ಒಪ್ಪಿಸಿ ತನ್ನ ಲೋಕಕ್ಕೆ ಕರೆದುಕೊಂಡು ಹೋದನು.






ಬಹಳ ಕಾಲದ ಹಿಂದೆ ಮೃತ್ಯುಕ ರಾಜ್ಯವನ್ನು ಶಬ್ದಪಾಲಕನೆಂಬ ರಾಕ್ಷಸನು ಆಳುತ್ತಿದ್ದನು. ಆತನಿಗೆ ನೂರುಜನ ಪತ್ನಿಯರು. ಆ ನೂರು ಜನಕ್ಕೆ ನೂರುಜನ ಮಕ್ಕಳೂ ಪುತ್ರಿಯರೆ! ಅದರಿಂದ ರಾಜನ ಅನಂತರ ರಾಜ್ಯವನ್ನು ಆಳಲು ಒಬ್ಬನಾದರೂ ಪುತ್ರನಿಲ್ಲದಂತಾಯಿತು.

ಇದಕ್ಕೆ ಕಾರಣವೇನೆಂದರೆ ಆತನು ತನ್ನ ರಾಜ್ಯದಲ್ಲಿ ಒಂದು ಕ್ರೂರ ಶಾಸನ ಮಾಡಿದ್ದ. 'ಅಳುತ್ತಾ ಜನಿಸಿದ ಗಂಡು ಶಿಶುವನ್ನೂ ನಗುತ್ತಾ ಜನಿಸಿದ ಹೆಣ್ಣು ಶಿಶುವನ್ನೂ ಅವು ಹುಟ್ಟಿದ ಕೂಡಲೇ ಹದಿನೈದು ಗಳಿಗೆಯಲ್ಲಿ ಪೂರ್ವದಿಕ್ಕಿನ ಶಕ್ತಿಗೆ ಬಲಿ ಕೊಡಬೇಕು' ಎಂದು ಕಟ್ಟಾಜ್ಞೆ ಮಾಡಿದ್ದ. ಮಕ್ಕಳು ಜನಿಸಿದ ಕೂಡಲೇ ಅಳುವುದು ದೈವ ನಿಯಾಮಕ. ಯಾರು ಅಲ್ಲವೆನ್ನುವರು? ಆದರೆ ರಾಜನ ಶಾಸನವನ್ನು ಧಿಕ್ಕರಿಸಲು ಧೈರ್ಯ ಸಾಲದೆ ಗಂಡು ಮಕ್ಕಳೆಲ್ಲರನ್ನೂ ಪ್ರಜೆಗಳು ಪೂರ್ವದಿಕ್ಕಿನ ಶಕ್ತಿಗೆ ಬಲಿ ಕೊಡುತ್ತಿದ್ದರು.

ರಾಜ್ಯದಲ್ಲಿ ಹುಟ್ಟಿದ ಗಂಡು ಮಕ್ಕಳೆಲ್ಲಾ ಶಕ್ತಿಗೆ ಬಲಿಯಾಗಲು, ಹೆಣ್ಣುಮಕ್ಕಳು ಬೆಳೆದು ದೊಡ್ಡವರಾದರು. ಈಗ ಆ ರಾಜ್ಯದಲ್ಲಿ ಎಲ್ಲಿ ನೋಡಿದರೂ ಹೆಂಗಸರೇ! ಉದ್ಯೋಗಸ್ಥರೆಲ್ಲಾ ಹೆಂಗಸರು. ಸೈನಿಕರೂ ಹೆಂಗಸರೇ.

ಹೀಗೆ ಗಂಡು ಮಕ್ಕಳೆಲ್ಲಾ ನಾಶವಾಗಲು ದೇಶದಲ್ಲಿ ಅಶಾಂತಿ, ಅನಿಷ್ಟವುಂಟಾಯಿತು. ಅದರಿಂದ ಪ್ರಜೆಗಳೆಲ್ಲಾ ಸೇರಿ ತ್ರಿಮೂರ್ತಿಗಳನ್ನು ಕುರಿತು ಘೋರ ತಪಸ್ಸು ಮಾಡಲು ಪ್ರಾರಂಭಿಸಿದರು. ಆ ತಪಸ್ಸಿಗೆ ಮೂರು ಲೋಕಗಳೂ ಕಂಪಿಸಿದವು.

ಆಗ ದೇವಲೋಕದಲ್ಲಿ ಬ್ರಹ್ಮ ಗಬಗಬನೆ ಹೊರಟು ಲಯಕ್ಕೆ ಕಾರಕನಾದ ಶಿವನ ಹತ್ತಿರ ಬಂದು "ಎಲೈ ಪರಮೇಶ್ವರನೇ! ಕಷ್ಟಪಟ್ಟು ಪ್ರತಿದಿವಸವೂ ನಾನು ಮೃತ್ಯುಕ ರಾಜ್ಯಕ್ಕೆ ಎಷ್ಟೋ ಮಂದಿ ಗಂಡು ಮಕ್ಕಳನ್ನು ಸೃಷ್ಟಿಸಿ ಕಳುಹಿಸುವದೇನು? ನೀನು ಹದಿನೈದು ಗಳಿಗೆಯಲ್ಲಿ ಅವುಗಳನ್ನು ಕೊಲ್ಲು

ಕಮಲಾಬಾಯಿ, ಹುಬ್ಬಳ್ಳಿ



ವುದೆಂದರೇನು? ಈಗ ಆ ರಾಜನ ಕಿರಿಯ ರಾಣಿಗೆ ಒಬ್ಬ ಮಗನನ್ನು ಕೊಡುತ್ತಿದ್ದೇನೆ. ಅವನ ಗೋಜಿಗೆ ಹೋದೆಯಾದರೆ ನಾನು ಸುಮ್ಮನಿರಲಾರೆ. ಸೃಷ್ಟಿ ಮಾಡುವ ನನ್ನ ಉದ್ಯೋಗವನ್ನು ತ್ಯಜಿಸಬೇಕಾಗುತ್ತದೆ ಕಂಡೆಯಾ" ಎಂದು ನಿಷ್ಠುರ ನುಡಿದನು.

ಅದಕ್ಕೆ ಶಿವನು "ಎಲೈ ಬ್ರಹ್ಮ, ಹುಟ್ಟಿಸುವವನು ನೀನು, ರಕ್ಷಿಸುವವನು ವಿಷ್ಣು, ನಡುವೆ ನನ್ನನ್ನು ಆಡಿಕೊಂಡರೆ ಏನು ಲಾಭ? ಹೋಗಿ ವಿಷ್ಣುವನ್ನೇ ಕೇಳು" ಎಂದನು. ಆಗ ಇಬ್ಬರೂ ಒಟ್ಟಿಗೆ ವಿಷ್ಣುಮೂರ್ತಿಯ ಹತ್ತಿರಕ್ಕೆ ಹೋದರು. ಬ್ರಹ್ಮನು ಹೇಳಿದುದನ್ನೆಲ್ಲಾ ಕೇಳಿ ನಗುತ್ತಾ ವಿಷ್ಣು ಹೇಳಿದ. "ಈ ವಿಪರೀತಕ್ಕೆಲ್ಲಾ ಕಾರಣ ನನ್ನ ಶಾಪ. ಆ ಶಾಪವೇನೋ, ಅದನ್ನು ಏಕೆ ನಾನು ಪ್ರಯೋಗಿಸಬೇಕಾಯಿತೋ ವಿವರಿಸುವೆನು. ಮೃತ್ಯುಕ ರಾಜ್ಯದಲ್ಲಿ ಶಬ್ದಪಾಲಕನೆಂಬ ರಾಕ್ಷಸನಿದ್ದಾನೆ. ಮೂರ್ಖನೂ, ಗರ್ವಿಯೂ ಆದ ಆತನು ತನ್ನ ಸಾವಿರಮಂದಿ ಮಕ್ಕಳೊಡಗೂಡಿ, ಪರಿವಾರದೊಂದಿಗೆ ವೈಕುಂಠದ ಮೇಲೆ ಧಾಳಿ ಮಾಡಲು ಬಂದ. ಅವನ ಅಪಾಯವಿಲ್ಲದಂತಿರಲು ಆಗ ಒಂದು ಉಪಾಯ ಹೂಡಿದೆ. ವೃದ್ಧನಾದ ರಾಕ್ಷಸ ಯೋಗಿಯೊಬ್ಬನ ವೇಷದಿಂದ ಆ ರಾತ್ರಿ ಅವರ ಶಿಬಿರಕ್ಕೆ ಹೋಗಿ ಆ ಮಾತು ಈ ಮಾತು ಹೇಳಿ "ಎಲೈ ರಾಕ್ಷಸರಾಜನೇ, ಬಲಿಷ್ಠರಾದ ಸಾವಿರ ಕುಮಾರರನ್ನು ಕಂಡು ನೀನು ಹೆಮ್ಮೆ ಪಡುತ್ತಿರುವೆ. ಅಸಲು ಅವರ ಜನನದ ರಹಸ್ಯ ಏನಾದರೂ ತಿಳಿದಿದೆಯೇ ನಿನಗೆ?" ಎಂದು ಕೇಳಿದೆ. "ಹೋಗಯ್ಯ, ನನಗೆ ತಿಳಿಯದೆಂದರೇನು ಈ ಸಣ್ಣ ವಿಷಯ. ನನ್ನ ಕುಮಾರರು ಸಾವಿರಮಂದಿಯೂ ಅಮಾವಾಸ್ಯೆ ಅರ್ಧರಾತ್ರಿ ಹುಟ್ಟಿದರು. ಅದರಲ್ಲಿ ವಿಶೇಷವಾದರೂ ಏನಿದೆ?" ಎಂದ ಶಬ್ದಪಾಲಕ. 'ಅರೆರೆ, ಹುಚ್ಚ ರಾಜನೇ, ಇದರಲ್ಲೇನು ವಿಶೇಷವಿದೆ ಎಂದು ಬಹು ಲಘುವಾಗಿ ಮಾತನಾಡುತ್ತಿರುವೆಯಲ್ಲಾ! ಮುಖ್ಯವಾದ ರಹಸ್ಯ ಗಮನಿಸದಾದೆ. ಅಲ್ಲ, ನಿನ್ನ ಮಕ್ಕಳು ಸಾವಿರಮಂದಿಯೂ ಹುಟ್ಟಿದಾಗ ಅಳುತ್ತಿದ್ದರೋ, ನಗುತ್ತಿದ್ದರೋ ಹೇಳು" ಎಂದೆ. "ಅಳುತ್ತಲಿದ್ದಿರಬಹುದು. ಆದರೂ ನಮ್ಮ ಪುರೋಹಿತರಿಗೆ

ಹೇಳಿ ಕಳುಹಿಸೋಣ" ಎಂದು ಸೇವಕನನ್ನು ಕಳುಹಿಸಿದ.

ಇಷ್ಟರಲ್ಲಿ ನಾನು ಅವನೊಂದಿಗೆ "ಎಲೈ ರಾಜನೇ, ಗಂಡು ಮಗು ಅಳುತ್ತಾ ಹುಟ್ಟಿದರೂ, ಹೆಣ್ಣು ಶಿಶುವು ನಗುತ್ತಾ ಹುಟ್ಟಿದರೂ ಬಹಳ ಅನಿಷ್ಟ. ರಾಜ್ಯಕ್ಕೂ ರಾಜನಿಗೂ ಹಾನಿ. ಅಂತಹ ಪ್ರಭುವಿಗೆ ಯುದ್ಧದಲ್ಲಿ ಜಯ ಲಭಿಸಲಾರದು. ಯಾವ ಕಾರ್ಯ ಮಾಡಲು ಹೋದರೂ ಅದು ವ್ಯತಿರುಕ್ತವಾಗಿ ನಡೆಯುವುದು. ಈ ಜನ್ಮದಲ್ಲಿ ಕಷ್ಟಗಳು ಈ ರೀತಿ ಇದ್ದರೆ, ಮುಂದಿನ ಜನ್ಮದಲ್ಲಿ ಆ ರಾಜನಿಗೆ ಆಗುವ ಸಂತತಿ ನಾಶ ಹೊಂದುವುದು. ಇದು ನಮ್ಮ ಗುರುಗಳಾದ ಶುಕ್ರಾಚಾರ್ಯರು ಅಪ್ಪಣೆ ಕೊಡಿಸಿದ ಮಾತು...." ಎಂದು ಹೇಳುತ್ತಿರುವಾಗ ಹೋದ ನೌಕರನು ಹಿಂದಿರುಗಿ ಬಂದು "ಸ್ವಾಮಿ, ನಮ್ಮ ಕುಮಾರರೆಲ್ಲರೂ ಎಲ್ಲರಂತೆ ಅಳುತ್ತಾ ಜನಿಸಿದರಂತೆ" ಎಂದ.

ಇದನ್ನು ಕೇಳಿದನಂತರ ಒಂದು ಕ್ಷಣವಾದರೂ ಆಲಸ್ಯ ಮಾಡದೆ ಶಬ್ದಪಾಲಕನು ತನ್ನ ರಾಜ್ಯವನ್ನು ಸೇರಿ ಸಾವಿರಮಂದಿ ಕುಮಾರರ ತಲೆಗಳನ್ನೂ ತೆಗೆಯಿಸಿ, ಕೋಟೆಯ ಹೆಬ್ಬಾಗಿಲಿಗೆ ನೇತು ಹಾಕಿಸುವಂತೆ ಮಂತ್ರಿಗೆ ಆಜ್ಞಾಪಿಸಿದನು. ಅಷ್ಟೇ ಅಲ್ಲ. ಅಂದಿನಿಂದ ತನ್ನ ರಾಜ್ಯದಲ್ಲಿ ಅಳುತ್ತಾ ಜನಿಸಿದ ಗಂಡು ಶಿಶುಗಳನ್ನೂ



ನಗುತ್ತಾ ಹುಟ್ಟಿದ ಹೆಣ್ಣು ಶಿಶುಗಳನ್ನೂ ಶಕ್ತಿಗೆ ಬಲಿ ಕೊಡಬೇಕೆಂದು ಶಾಸನ ಮಾಡಿದ. ಈ ಉಪಾಯದಿಂದ ಅವನ ಧಾಳಿಯಿಂದ ನಾನು ತಪ್ಪಿಸಿಕೊಂಡೆ. ಇದೆಲ್ಲ ನನ್ನ ಮಹಿಮೆ" ಎಂದು ಮುಗಿಸಿದ ವಿಷ್ಣು.

ಆಗ ಶಿವ "ಸರಿ ಸರಿ. ನೀನು ಕಲ್ಪಿಸಿದ ಯುಕ್ತಿಯಿಂದ ಆ ಧೂರ್ತನಿಗೆ ತಕ್ಕ ಶಾಸ್ತಿ ಆಯಿತು. ಈಗವನು ಸನ್ಮಾರ್ಗಕ್ಕೆ ಬಂದ. ಆದ್ದರಿಂದ ಅವನಿಗೆ ಗಂಡು ಸಂತತಿ ಉಳಿಯುವಂತೆ ಉಪಾಯ ಹೇಳಬೇಕು" ಎಂದು ವಿಷ್ಣುವನ್ನು ಕೋರಿದ.

ಶಬ್ದಪಾಲಕನಿಗೆ ಗಂಡು ಮಗುವನ್ನು ಪ್ರಸಾದಿಸಲು ಯೋಚಿಸಿದ್ದೇನೆಂದ ಬ್ರಹ್ಮ.

ಆಗ ವಿಷ್ಣುವಿಗೆ ಶಬ್ದಪಾಲಕನ ಮೇಲೆ ಮರುಕವುಂಟಾಯಿತು. "ಮಹೇಶನೆಂಬುವ

ನನ್ನು ದೇವಲೋಕದಿಂದ ಕಳುಹಿಸಿ, ಮೃತ್ಯುಕ ರಾಜ್ಯವನ್ನು ಪಾಲಿಸುವ ಶಬ್ದ ಪಾಲಕನ ಕಿರಿಯ ರಾಣಿಯ ಮಗನಾಗಿ ಹುಟ್ಟುವಂತೆ ಏರ್ಪಾಟು ಮಾಡಿರುವೆನು" ಎಂದ.

ಪೂರ್ವಜನ್ಮದಲ್ಲಿ ಎಲ್ಲ ಪುಣ್ಯಕಾರ್ಯಗಳನ್ನು ಮಾಡಿದಾತನಲ್ಲವೇ ದೇವಲೋಕಕ್ಕೆ ಬರಲು ಅರ್ಹ. ಆದ್ದರಿಂದ ನಾವು ಕಳುಹಿಸಿದ ಮಹೇಶನು ತಾನು ದೇವಲೋಕದಲ್ಲಿ ಮಾಡಿದ ಸತ್ಕಾರ್ಯಗಳನ್ನು ನೆನೆಸಿಕೊಂಡು ನಗುತ್ತಾ ಜನಿಸುವನು. ಆದರೆ ಹುಟ್ಟಿದ ಕೂಡಲೇ ಮಾತನಾಡುವ ಶಕ್ತಿಯಿಲ್ಲದಂತೆ ಮಾಡಿದೆನೆಂದರೆ ನಮ್ಮ ದೇವಲೋಕದ ರಹಸ್ಯಗಳನ್ನು ಬಯಲುಮಾಡಲಾರ. ಬಾಲ್ಯವೆಲ್ಲವೂ ಹೀಗೆ ಮೂಕತನದಲ್ಲಿ ಕಳೆದು ಹೋದರೆ ದೊಡ್ಡವನಾದಮೇಲೆ ಪೂರ್ವಜನ್ಮದ ವಿಶೇಷಗಳನ್ನು ಮರೆತು, ಮಾನವರಲ್ಲಿ ಕಲೆತುಬಿಡುವನು. ಆದ್ದರಿಂದ ನಮ್ಮ ರಹಸ್ಯಗಳು ನಮ್ಮ ಲೋಕದಲ್ಲೇ ಭದ್ರವಾಗಿರುವುದು. ಇದೇ ನನಗೆ ತೋರಿದ ಮಾರ್ಗ" ಎಂದು ತನ್ನ ಏರ್ಪಾಟಿಗೆ ವಿವರಣೆ ಕೊಟ್ಟ.

"ಭೇಷ್ ಬಹಳ ಸೊಗುಸಾಗಿದೆ" ಎಂದರು ಬ್ರಹ್ಮ ಮಹೇಶ್ವರರು.

ತ್ರಿಮೂರ್ತಿಗಳ ಅಭೀಷ್ಟದಂತೆ ಮಹೇಶನು ಮೃತ್ಯುಕ ರಾಜ್ಯದಲ್ಲಿ ಯುವರಾಜನಾಗಿ ಜನಿಸಿದ. ನಗುತ್ತಾ ಜನಿಸಿದುದರಿಂದ ಉಳಿದುಕೊಂಡು ಆತನು ಬೆಳೆದು ದೊಡ್ಡವನಾಗಿ ಸಿಂಹಾಸನಕ್ಕೆ ಬರಲು, ತಂದೆ ಮಾಡಿದ್ದ ಕ್ರೂರ ಶಾಸನವನ್ನು ತೆಗೆದು ಹಾಕಿಸಿದ. ದೈವಾಂಶಸಂಭೂತನಾದುದರಿಂದ ಆತನ ಆಳಿಕೆಯಲ್ಲಿ ಪ್ರಜೆಗಳೆಲ್ಲರೂ ಸೌಖ್ಯವಾಗಿ ಸುಖವಾಗಿದ್ದರು.

ವಿಷ್ಣುವಿನ ಮಾಯೆಯಿಂದಲೇ ಇಂದೂ ಸಹ ಮಾನವರು ಜನಿಸಿದ ಕೂಡಲೇ ಮಾತನಾಡರೆಂದೂ ಪೂರ್ವಜ್ಞಾನದಿಂದ ಹುಟ್ಟಿ ಕ್ರಮೇಣ ಅದೆಲ್ಲವನ್ನೂ ಮರೆಯುವರೆಂದೂ ಹಿರಿಯರು ಹೇಳುವರು.






ಒಂದಾನೊಂದು ಕಾಲದಲ್ಲಿ ಉಜ್ಜಯಿನಿ ನಗರಕ್ಕೆ ರೂಪಚಂದ್ರನು ರಾಜನಿದ್ದನು. ಆತನಿಗೆ ಪಾಪ, ಕಣ್ಣು ಮತ್ತು ಕಾಲಿಲ್ಲದಿದ್ದುದರಿಂದ ಕುಳಿತಲ್ಲಿಂದ ಕದಲಲಾಗುತ್ತಿರಲಿಲ್ಲ. ಅಷ್ಟೇ ಅಲ್ಲದೆ ಈ ಪ್ರಪಂಚದ ಅಂದಚಂದಗಳನ್ನು ಕಣ್ಣಾರೆ ಕಂಡು ಆನಂದಿಸುವ ಅವಕಾಶವಿಲ್ಲದಾಯಿತು.

ರಾಜನು ವಿರಕ್ತನಾಗಿ "ನಾನು ಮಹಾಪಾಪಿ" ಎಂದು ನಿರಾಸೆಗೊಂಡು ಸುಮ್ಮನಿದ್ದ. ಹೀಗಿರುವಲ್ಲಿ ಒಂದುದಿನ ನಗರದಲ್ಲಿ ಒಂದು ವಿಚಿತ್ರವದಂತಿಹರಡಿತು ಅದೇನೆಂದರೆ, – ಕೋಟೆ ಬುರುಜಿನ ಮೇಲೆ ಒಂದು ಅರಳಿಮರ ಗಾಳಿ ಬೀಸಿದಾಗಲೆಲ್ಲ ಒಂದು ರೀತಿ ಧ್ವನಿ ಮಾಡುವುದೆಂದೂ, ಆ ಧ್ವನಿ ಮಾನವನು ಮಾತನಾಡಿದಂತೆಯೇ ಇರುವುದು ಎಂದು. ಈ ಸುದ್ದಿ ಕೇಳಿದ ಕೂಡಲೇ ರಾಜ ಮಂತ್ರಿಗೆ ಹೇಳಿ ಕಳುಹಿಸಿ, ತನಗೆ ಆ ಮರದ ಕೆಳಗೆ ಬಿಡಾರ ಏರ್ಪಾಟು ಮಾಡುವಂತೆ ಆಜ್ಞಾಪಿಸಿದ.

ಮರಮಾತನಾಡುವ ವಿಚಿತ್ರ ತಿಳಿಯಲು ಅಲ್ಲಿಯೇ ಕಾದುಕೊಂಡು ಕುಳಿತ.

ನಡುರಾತ್ರಿ ಗಾಳಿ ಬೀಸಿ, ಎಷ್ಟೋ ದಿನಗಳಿಂದ ಪರಿಚಿತನಾದ ಮನುಷ್ಯನು ಮಾತನಾಡಿಸುವಂತೆ ರೂಪಚಂದ್ರನ ಕಿವಿಯಲ್ಲಿ ಯಾರೋ ಈ ಮಾತುಗಳನ್ನು ಹೇಳಿದರು. "ಎಲೈ ರಾಜನೇ, ನಾನು ಅಗ್ನಿಶರ್ಮನೆಂಬ ಬ್ರಾಹ್ಮಣ. ಕಡುಪಾಪಗಳನ್ನು ಮಾಡಿದೆನಾದ್ದರಿಂದ ನಾನು ಈ ಮರವನ್ನು ಆಶ್ರಯಿಸಬೇಕಾದ ಗತಿ ಬಂತು. ಈಗಲಾದರೂ ಪುಣ್ಯಕಾರ್ಯ ಮಾಡಿದೆನೆಂದರೆ ಪಾಪ ಪರಿಹಾರವಾಗಿ, ಮಾನೂಲು ಜನ್ಮ ಹೊಂದುವೆನು. ಆದ್ದರಿಂದ ಎಷ್ಟೇ ಕಷ್ಟವಾದರೂ ನಿನ್ನ ಶರೀರ ಬಾಧೆಯನ್ನು ಹೋಗಲಾಡಿಸುವೆನು. ಇದಕ್ಕೆ ನಾನು ಮಾನವರೂಪ ತಾಳಿ ಸ್ವಲ್ಪ ಧನವನ್ನು ಕೈಯಲ್ಲಿಟ್ಟುಕೊಂಡಿರಬೇಕು. ನನ್ನ ಪ್ರಯಾಣಕ್ಕೆ ಅತ್ಯವಶ್ಯಕವಾದ ಏರ್ಪಾಟುಗಳನ್ನು ಒದಗಿಸಿದ ಪಕ್ಷದಲ್ಲಿ ಈಗಲೇ ಹೊರಟು, ನಿನಗೆ ಕಾಯಿಲೆವಾಸಿಯಾಗಲು ತಕ್ಕ ದಿವ್ಯವಾದ ಔಷಧವನ್ನು ಹುಡುಕಿ ತರುತ್ತೇನೆ. ನನ್ನ ಮಾತಿನಲ್ಲಿ ನಿನಗೆ ನಂಬಿಕೆಯಿದ್ದರೆ, ಹಣ ತರಿಸಿ ಈ ಮರದ ಪೊಟ್ಟರೆಯಲ್ಲಿ ಹಾಕು" ಎಂದು ಕೇಳಿಸಿತು.

ಜಯಕಾರ್, ಉಡಿಪಿ



"ಅಲ್ಲಿಯೇ ಸುಂದರ ತರುಣನೊಬ್ಬನನ್ನು ಅಲಂಕರಿಸುತ್ತಾ ಮತ್ತೆ ಕೆಲವರು ನೆರೆ ದಿದ್ದರು." ಈ ಅಡಾವುಡಿಯೆಲ್ಲಾ ಏನು?" ಎಂದು ಅಲ್ಲಿದ್ದ ಕೆಲವರನ್ನು ಕೇಳಲು, ಅವರು "ಅಯ್ಯಾ, ಈ ತೀರಿಕೊಂಡಿರುವ ಸ್ತ್ರೀ ಈ ಯುವಕನ ಹೆಂಡತಿ. ಹೆಂಡತಿ ಸತ್ತರೆ ಗಂಡನು ಆಕೆಯೊಂದಿಗೆ ಸಹಗಮನ ಮಾಡಬೇಕು. ಇದು ನಮ್ಮ ದೇಶದ ಆಚಾರ. ಅದಕ್ಕೆಂದು ಆತನನ್ನು ಶೃಂಗರಿಸುತ್ತಿದ್ದೇವೆ" ಎಂದರು.

ಅವರ ಮಾತುಗಳನ್ನು ಕೇಳಿ ಶರ್ಮ ಕಿಡಿಕಿಡಿಯಾದ. "ನಿಮ್ಮ ಆಚಾರಕ್ಕೆ ಬೆಂಕಿ ಹಾಕ! ಇದು ಅನಾಚಾರ. ಇದನ್ನು ಯಾವ ಶಾಸ್ತ್ರವೂ ಒಪ್ಪುವುದಿಲ್ಲ. ಪತ್ನಿ ಸತ್ತರೆ ಗಂಡನು ಪುನರ್ವಿವಾಹವಾಗಿ ಸುಖ ವಾಗಿ ಸಂಸಾರಮಾಡಬಹುದು. ಪ್ರತಿದೇಶ ದಲ್ಲೂ ಬುದ್ಧಿವಂತರು ಈ ಕೆಲಸವನ್ನೇ ಮಾಡುವರು" ಎಂದು ಬುದ್ಧಿ ಹೇಳಿದ. ಅವರು ತಮ್ಮ ಅಜ್ಞಾನಕ್ಕೆ ನಾಚಿ, ಬುದ್ಧಿ ತಂದುಕೊಂಡರು.

ಶರ್ಮ ಅಲ್ಲಿಂದ ಹೊರಟು ಮತ್ತೊಂದು ಪಟ್ಟಣ ಸೇರಿದ. ಅದೇನು ವಿಚಿತ್ರವೋ, ಅಲ್ಲಿನ ಪ್ರಜೆಗಳೆಲ್ಲರೂ ವ್ಯಾಕುಲ ಮತ್ತು ಭೀತಿಯಿಂದ ಚಿಂತಾಕ್ರಾಂತರಾಗಿ ಮುಖ ಗಳನ್ನು ಜೋತು ಹಾಕಿಕೊಂಡಿದ್ದರು. ಕಾರಣ ವೇನೆಂದು ಕೇಳಿದರೆ ಯಾರೂ ಉತ್ತರ ಹೇಳ ಲಿಲ್ಲ. ಕಡೆಗೆ ಶರ್ಮ ಒಬ್ಬ ವೃದ್ಧನನ್ನು

ಈ ಮಾತುಗಳನ್ನು ಕೇಳಿ ರೂಪಚಂದ್ರ 'ನಿಜವಾಗಿ ನನ್ನ ಬಾಧೆಯನ್ನು ಹೋಗ ಲಾಡಿಸಿದಾತನಿಗೆ ಧನವೇ ಅಲ್ಲ, ರಾಜ್ಯ ವನ್ನೇ ಕೊಟ್ಟು ಬಿಡುತ್ತಿದ್ದೆ' ಎಂದುಕೊಂಡ ಮನದಲ್ಲಿ. ಗಂಟು ಗಂಟಾಗಿ ಹಣ ತರಿಸಿ, ಆ ಮರದ ಪೊಟ್ಟರೆಯಲ್ಲಿ ಹಾಕಿಸಿದ. ಆಗ ಲಿಂದ ಆ ರಾಜನಿಗೆ ಮರ ಧ್ವನಿ ಮಾಡು ವುದು ಕೇಳಿಸಲಿಲ್ಲ. ಇದಕ್ಕೆ ಕಾರಣವೇನು ಗೊತ್ತೇ?

ಮರದ ಪೊಟ್ಟರೆಯಲ್ಲಿ ಸುರಿದ ಹಣ ವನ್ನು ತೆಗೆದುಕೊಂಡು ಅಗ್ನಿಶರ್ಮ ಹೊರಟು ಹೋದನೆಂದಾಯಿತು. ಆತನು ಹೋಗಿ ಹೋಗಿ ಬಂದು ನಗರ ಸೇರಿದ. ಅಲ್ಲೊಂದು ಸ್ಥಳದಲ್ಲಿ ಸ್ತ್ರೀಯ ಹೆಣದ ಸುತ್ತಲೂ ಅನೇಕರು ಗುಂಪು ಗೂಡಿದ್ದರು.

ಒಂದೇ ಹಠದಿಂದ ಕೇಳಲು "ಅಯ್ಯಾ ತರುಣನೇ, ಈ ಹತ್ತು ದಿನಗಳಿಂದ ಭಯಂಕರವಾದ ವಿಚಿತ್ರ ಪ್ರಾಣಿಯೊಂದು ಬಂದು ಗ್ರಾಮಸ್ಥರನ್ನೆಲ್ಲಾ ಕಬಳಿಸಿಕೊಂಡು ಹೋಗುತ್ತಿದೆ. ಅದಕ್ಕೆ ಎಂಟು ಕಾಲು, ಎಂಟು ಕೈ. ಆನೆಯ ತಲೆಗಿಂತಲೂ ದೊಡ್ಡ ತಲೆ, ತಲೆಯಮೇಲೆ ಎರಡು ಚೂಪಾದ ಕೊಂಬುಗಳು, ಒಂದು ಕಣ್ಣು ಇದೆ. ಆ ಕಣ್ಣು ಹಣೆಯ ಮಧ್ಯೆಯಿದೆ. ಈ ಪ್ರಾಣಿ ಬಾಯಿ ತೆರೆದು ಜ್ವಾಲೆಗಳನ್ನು ಉಗುಳುತ್ತದೆ....." ಎಂದು ಹೇಳುತ್ತಿರುವಲ್ಲಿ ಬುಸುಗುಟ್ಟುತ್ತಾ ಭಯಂಕರವಾದ ಬೊಬ್ಬೆ ಕೇಳಿಸಲು ಎಲ್ಲರೂ ಓಡಲು ಪ್ರಾರಂಭಿಸಿದರು. ಕೂಡಲೇ ಅಗ್ನಿಶರ್ಮನು "ಎಲೈ ಯುವಕರೇ ನಿಲ್ಲಿ! ನಿಲ್ಲಿ! ಕೂಡಲೇ ಹೋಗಿ ಒಂದು ನಿಲುವುಗನ್ನಡಿ ತೆಗೆದುಕೊಂಡು ಬನ್ನಿ" ಎಂದ. ಅಂತೆಯೇ ಅವರು ಎಲ್ಲಿಂದಲೋ ಒಂದು ದೊಡ್ಡ ಕನ್ನಡಿ ತೆಗೆದುಕೊಂಡು ಬರಲು, ಆ ಪ್ರಾಣಿ ಬರುವ ದಾರಿಯಲ್ಲಿ ಒಂದು ಬಂಡೆಗೆ ಅದನ್ನು ಸೇರಿಸಿ ಭದ್ರವಾಗಿ ಕಟ್ಟಿದ. ಮತ್ತೆ ಸ್ವಲ್ಪ ಸಮಯಕ್ಕೆಲ್ಲಾ ಸರ್ರನೆ ಆ ವಿಚಿತ್ರ ಪ್ರಾಣಿ ಬಂದು ಕೆಲವು ಜನರನ್ನು ತಿಂದು ಹಾಕಿತು. ಮತ್ತೆ ಹಿಂದಿರುಗುವಲ್ಲಿ ಅದಕ್ಕೆ ಕನ್ನಡಿ ಕಾಣಿಸಿತು. ತನ್ನಂತಹದೇ ಮತ್ತೊಂದು ಪ್ರಾಣಿ ತನ್ನ ಮೇಲೆ ಸ್ಪರ್ಧೆಗೆ ಬಂದಿತೆಂದುಕೊಂಡು ಕನ್ನಡಿಯಲ್ಲಿ ಕಾಣುತಿದ್ದ ಪ್ರತಿಬಿಂಬದ



ಮೇಲೆ ಹಾರಿತು. ಆ ಏಟಿಗೆ ಕನ್ನಡಿ ನುಚ್ಚುನೂರಾಯಿತು. ಆದರೂ ಆ ಪ್ರಾಣಿ ಆವೇಶದಿಂದ ಆ ಕನ್ನಡಿಗೆ ತಲೆ ಇಡಿಯುತ್ತಲೇ ಇರುವಲ್ಲಿ ಗಾಜಿನ ಚೂರುಗಳು ಅದರ ಶರೀರದಲ್ಲೆಲ್ಲಾ ಚುಚ್ಚಿಕೊಂಡು, ರಕ್ತ ಸುರಿಯಲಾರಂಭಿಸಿತು. ಆ ಸಮಯದಲ್ಲಿ ಗ್ರಾಮಸ್ಥರೆಲ್ಲರೂ ಸೇರಿ ಅದನ್ನು ಬರ್ಜಿಯಿಂದ ತಿವಿದು, ತಿವಿದು, ಆ ದುಷ್ಟ ಪ್ರಾಣಿಯನ್ನು ಕೊಂದು ಹಾಕಿದರು. ಈ ರೀತಿಯಲ್ಲಿ ಅಗ್ನಿಶರ್ಮನ ಧರ್ಮದಿಂದ ಆ ನಗರಕ್ಕಿದ್ದ ಒಂದು ಭಾರಿ ಗಂಡಾಂತರ ಕಳೆಯಿತು.

ಆಗ ಆ ಪಟ್ಟಣವಾಸಿಗಳು ಶರ್ಮನನ್ನು ತಮ್ಮ ಊರಿನಲ್ಲಿಯೇ ಇದ್ದು ಬಿಡುವಂತೆ ಕೇಳಿಕೊಂಡರು. ಆದರೆ ಆತನು "ನಾ



ನೊಂದು ಅಗತ್ಯವಾದ ರಾಜಕಾರ್ಯದ ಮೇಲೆ ಹೋಗುತ್ತಿರುವೆನು. ಆದ್ದರಿಂದ ಕ್ಷಣವಾದರೂ ನಿಲ್ಲಲು ವೇಳೆಯಿಲ್ಲ ಎಂದು ವಿವರಗಳನ್ನೆಲ್ಲಾ ಹೇಳಲು, ಅವರು "ಇಲ್ಲಿಗೆ ನಾಲ್ಕು ಹರಿದಾರಿ ದೂರದಲ್ಲಿ 'ಜೀವವನ' ವೆಂಬ ವನವಿದೆ. ಅದರಲ್ಲಿ ಯಕ್ಷರೂ, ಗಂಧರ್ವರೂ ವಿಹಾರಮಾಡುವರು. ಅವರಿಗೆ ಕನಿಕರವುಂಟಾದರೆ ದಿವ್ಯವಾದ ಔಷಧಿಗಳನ್ನು ಕೊಡಬಲ್ಲರು. ಅದನ್ನು ಸೇವಿಸಿದವರಿಗೆ ಶರೀರ ಬಾಧೆಗಳು ಯಾವವೂ ಬರಲಾರವು" ಎಂದು ಹೇಳಿ ಆತನಿಗೆ ಜಯವುಂಟಾಗುವಂತೆ ದೇವರನ್ನು ಪರಿಪರಿವಿಧದಲ್ಲಿ ಬೇಡಿಕೊಂಡರು.

ಅಗ್ನಿಶರ್ಮ ಅವರಿಗೆ ತನ್ನ ಕೃತಜ್ಞತೆಯನ್ನು ತಿಳಿಸಿ, ಮುಂದಕ್ಕೆ ಹೊರಟ.

ಈಶಾನ್ಯದಿಕ್ಕಿನಲ್ಲಿ ನಾಲ್ಕು ಹರಿದಾರಿ ಹೋಗಲು ರಮಣೀಯವಾದ ವಿಧವಿಧ ವೃಕ್ಷಗಳೂ, ಪೊದೆಗಳೂ ಕಾಣಿಸಿದವು. ಅಲ್ಲಿ ಮಾರ್ಗ ಕಾಣಿಸದೆ ಪೊದೆಗಳನ್ನು ಛೇದಿಸಿ ದಾರಿ ಮಾಡಿಕೊಂಡು ಹೋಗಬೇಕಾಗಿತ್ತು. ಆ ಅರಣ್ಯ ಹೋಗುತ್ತಾ ಹೋಗುತ್ತಾ ದುರ್ಗಮವಾಗಿ ದಟ್ಟವಾಗಿ ಹುಲಿ, ತೋಳ, ಕರಡಿ ಮುಂತಾದ ಕ್ರೂರ ಮೃಗಗಳು ಕಾಣಿಸಿದವು. ಲಕ್ಷಾಂತರ ಚೇಳುಗಳೂ, ಸರ್ಪಗಳೂ ಅಡಿಗಡಿಗೆ ಅಡ್ಡಬರುತ್ತಿದ್ದವು. ಇವುಗಳನ್ನೆಲ್ಲಾ ಲಕ್ಷ್ಯಕ್ಕೆ ತಾರದೆ ಅಗ್ನಿಶರ್ಮ ಸಾಹಸದಿಂದ ಮುಂದೆ ಮುಂದೆ ನಡೆದ.

ಅನತಿದೂರದಲ್ಲಿ ಅತಿ ಆಕರ್ಷಣೀಯವಾದ ಒಂದು ಉದ್ಯಾನವನ ಕಾಣಿಸಿತು. ಅದರಲ್ಲಿದ್ದ ಪುಷ್ಪಗಳೆಲ್ಲವೂ ಪ್ರಿಯವಾದ ಸುಗಂಧವನ್ನು ಹೊರಚೆಲ್ಲುತ್ತಿತ್ತು. ಅಗ್ನಿಶರ್ಮ ಆ ಸೌಂದರ್ಯವನ್ನು ಕಂಡು ತನ್ಮಯನಾಗಿ ಹಾಗೇ ಒಂದೆಡೆ ಕುಳಿತುಬಿಟ್ಟನು.

ಅಷ್ಟರಲ್ಲಿ ರಾತ್ರಿ ಆಯಿತು. ಕತ್ತಲಾದಂತೆ ಆ ಅರಣ್ಯವೂ, ಉದ್ಯಾನವನವೂ ವಿಚಿತ್ರ ಶೋಭೆಯಿಂದ ಬೆಳಗುತಿತ್ತು. ಆ ವೃಕ್ಷಗಳ ಎಲೆ ಮತ್ತು ಕುಸುಮಗಳಲ್ಲಿ ಯಾವುದೋ ಒಂದು ಅಪೂರ್ವ ಶಕ್ತಿಯಿರುವುದೆಂದು ಗ್ರಹಿಸಿದ ಶರ್ಮ. ಏಕೆಂದರೆ ಅವುಗಳ ಗಾಳಿ ಸೋಕಿದಕೂಡಲೇ ಆತನಿಗೆ ಮಾರ್ಗಾಯಾಸವೂ ಮಾಯವಾಗಿ



ಉಲ್ಲಾಸ ಮತ್ತು ಶಕ್ತಿಗಳು ಕೂಡಿಬಂದವು. ಅಷ್ಟು ಮಾತ್ರವೇ ಅಲ್ಲ. ಅಲ್ಲಿ ಇದ್ದಷ್ಟು ಕಾಲವೂ ಹಸಿವು ಬಾಯಾರಿಕೆಗಳ ತೊಂದರೆಯಿಲ್ಲದಾಯಿತು.

ಅರ್ಧರಾತ್ರಿ ಸಮಯದಲ್ಲಿ ಹಿಂದಿನಿಂದ "ಯಾರು ನೀನು? ಎಲ್ಲಿಂದ ಬಂದೆ?" ಎಂಬ ಪ್ರಶ್ನೆಗಳು ಕೇಳಿ ಬಂದವು. ಅಗ್ನಿಶರ್ಮ ಹಿಂದಕ್ಕೆ ತಿರುಗಿ ನೋಡಲು ಹತ್ತುಮಂದಿ ಗಂಧರ್ವರು ಕಾಣಿಸಿದರು. ಧೈರ್ಯದಿಂದ ಎದ್ದು ನಿಂತು ಅವರಿಗೆ ತನ್ನ ವಿಷಯವನ್ನೆಲ್ಲಾ ಹೇಳಿದ ಶರ್ಮ. "ಇದು ದೇವತೆಗಳು ವಿಹಾರ ಮಾಡುವ ಜೀವವನವೆಂದು ನಿನಗೆ ತಿಳಿಯದೆ? ನಮ್ಮಾಜ್ಞೆಯಿಲ್ಲದೆ ಇಲ್ಲಿ ಕಾಲಿಟ್ಟದ್ದಕ್ಕೆ ನಿನ್ನನ್ನು ಶಿಕ್ಷಿಸಬೇಕು" ಎಂದು ಅವರು ಆತನನ್ನು ಹಗ್ಗದಿಂದ ಬಿಗಿದು ಕಟ್ಟಲು ಸಿದ್ಧರಾದರು.

ಆತನನ್ನು ಗಂಧರ್ವರು ಆ ರೀತಿ ಹಿಂಸೆ ಮಾಡುತ್ತಿರಲು ಮತ್ತೊಬ್ಬ ಗಂಧರ್ವ ಬಂದು "ಈ ಗಲಾಟೆ ಏನು?" ಎಂದು ಕೇಳುತ್ತಾ ಅಗ್ನಿಶರ್ಮನ ಕಡೆ ತದೇಕದೃಷ್ಟಿಯಿಂದ ನೋಡಿದ. ನೋಡು ನೋಡುತ್ತಲೇ ಆ ಹೊಸ ಗಂಧರ್ವ ಶರ್ಮನನ್ನು ಪ್ರೀತಿಯಿಂದ ಕಟ್ಟಿಕೊಂಡು "ಎಲೈ, ನೀನು ಶರ್ಮನಲ್ಲವೇನಯ್ಯಾ" ಎಂದು ಬಹು ವಿಧವಾಗಿ ಆದರಿಸಿದನು. ಮಿಕ್ಕ ಗಂಧರ್ವರು ಅಚ್ಚರಿಗೊಂಡು "ನಿನಗೆ ಮಾನವನೊಂದಿಗೆ ಗೆಳೆತನ ಹೇಗೆ ಆಯಿತು?" ಎಂದು ಕೇಳಲು ಆ ಹೊಸ ಗಂಧರ್ವ ಹೀಗೆ ಹೇಳಿದ. "ಒಂದು ಸಾರಿ ನಾನು ಶಾಪವಶದಿಂದ ಭೂಲೋಕದಲ್ಲಿ ಸರ್ಪವಾಗಿ ಜನಿಸಬೇಕಾಯಿತು. ಆ ರೂಪದಲ್ಲಿರುವಾಗ ನನ್ನನ್ನು ಒಬ್ಬ ಶತ್ರುವು ಕೊಂದನು. ಆ ದಾರಿಯಲ್ಲೇ ಬರುತ್ತಿದ್ದ ಶರ್ಮನು ನನಗೆ ಅಂತ್ಯ ಸಂಸ್ಕಾರಾದಿಗಳನ್ನು ನಡೆಸಲು ಆಗಲೇ ನಾನು ಶಾಪ ವಿಮುಕ್ತನಾದೆ" ಎಂದು ಹೇಳಲು ಗಂಧರ್ವರೆಲ್ಲರೂ ಅಗ್ನಿಶರ್ಮನಿಗೆ ನಮಸ್ಕಾರ ಮಾಡಿದರು. ಶರ್ಮ ತಾನು ಬಂದ ಕಾರ್ಯವನ್ನು ತಿಳಿಸಿದ ಕೂಡಲೇ ಆ ಗಂಧರ್ವಕುಮಾರನು ಅಗ್ನಿಶರ್ಮನನ್ನು ಪ್ರೇಮದಿಂದ ಆಲಂಗಿಸಿ ಎಲೆಗಳಿಂದ ತಯಾರಾದ ಒಂದು ದೊನ್ನೆ ತಂದು ಕೊಟ್ಟು ಮುಂಜಾನೆ ಪುಷ್ಪಗಳ

ಮೇಲಿಂದ ಉದುರುವ ಮಂಜಿನ ತೊಟ್ಟುಗಳನ್ನು ಶೇಖರಿಸಿಕೊಂಡು ಬರುವಂತೆ ಹೇಳಿದ. ಶರ್ಮ ಹಾಗೆಯೇ ಮಾಡಿ ತರಲು "ಶರ್ಮ, ನಮ್ಮ ಜೀವವನದಲ್ಲಿನ ಮಂಜಿನ ತೊಟ್ಟುಗಳು ಶುದ್ಧವಾದ ಮನಸ್ಸಿರುವವರು ಯಾರು ಸೇವಿಸಿದರೂ ಸಮಸ್ತವಾದ ಬಾಧೆಗಳಿಂದ ಕ್ಷಣಮಾತ್ರದಲ್ಲಿ ಮುಕ್ತರಾಗುವರು. ಆದರೆ ಕೃತಘ್ನರಮೇಲೂ, ಮಾತು ತಪ್ಪಿ ನಡೆಯುವವರಮೇಲೂ ಇದು ಕೆಲಸಮಾಡಲಾರದು" ಎಂದ.

ಸಂತೋಷದಿಂದ ಶರ್ಮ ಉಜ್ಜಯಿನಿಯನ್ನು ಸೇರಿ, ರೂಪಚಂದ್ರನಿಗೆ ಕೆಲವು ಮಂಜಿನ ತೊಟ್ಟುಗಳನ್ನು ಕೊಟ್ಟ. ಅವುಗಳ ಮಹಿಮೆಯಿಂದ ತಕ್ಷಣವೇ ರಾಜನಿಗೆ ಕಣ್ಣೂ, ಕಾಲೂ ಬಂದವು. ಪುನರ್ಜನ್ಮ ಬಂದಂತೆ ಸಂತೋಷದಿಂದ ಇರತೊಡಗಿದ. ಆಗ ಶರ್ಮ "ರಾಜನೇ, ನನ್ನ ಬಹುಮಾನದ ವಿಷಯವೇನಾಯಿತು?" ಎಂದು ಕೇಳಿದ. ರೂಪಚಂದ್ರನು ಏನೂ ತಿಳಿಯದವನಂತೆ ಆ ಕಡೆ ಈ ಕಡೆ ನೋಡಲಾರಂಭಿಸಿದ.

ಆಗ ಅಗ್ನಿಶರ್ಮ "ಎಲೈ ರಾಜನೇ! 'ಧನವೇ ಅಲ್ಲ ರಾಜ್ಯವನ್ನೇ ಕೊಟ್ಟು ಬಿಡುತ್ತಿದ್ದೆ' ಎಂದು ನೀನು ಮನಸ್ಸಿನಲ್ಲಿಯೇ ಅಂದುಕೊಳ್ಳಲಿಲ್ಲವೇ? ಮನದಲ್ಲಾಡಿಕೊಂಡ ಮಾತು ಯಾರೂ ತಿಳಿಯಲಾರರೆಂದುಕೊಂಡಿರ ಬಹುದು ನೀನು. ಏನಾದರೇನು? ನಿನಗಾಗಿ ಅನೇಕ ಕಷ್ಟಗಳನ್ನು ಪಟ್ಟು, ಈ ಮಂಜಿನ ತೊಟ್ಟುಗಳನ್ನು ತಂದು, ನಿನ್ನನ್ನು ಸುಖಪಡಿಸಬೇಕೆಂದಿದ್ದೆ. ಆದರೆ ಸುಖವಾಗಿರುವ ಭಾಗ್ಯ ನಿನಗಿಲ್ಲದಿದ್ದರೆ ನಾನೇನುಮಾಡಲಿ? ಈಗ ನನ್ನ ಶಾಪವಿಮೋಚನೆ ಆಯಿತು. ನಾನು ಹೋಗಿಬರುತ್ತೇನೆ" ಎಂದ. ಅಗ್ನಿಶರ್ಮ ಮತ್ತೆ ಕಾಣಿಸಲಿಲ್ಲ.

ಮಾತು ತಪ್ಪಿದನಾದ್ದರಿಂದ ರಾಜನು ಮತ್ತೆ ಯಥಾಸ್ಥಿತಿಗೆ ಬಂದು, ಕಣ್ಣೂ ಕಾಲೂ ಕಳೆದುಕೊಂಡು ಎಂದಿನಂತೆ ಬಾಧೆಪಡುತ್ತಿದ್ದ. ಶರ್ಮ ಹೊರಟು ಹೋದಂದಿನಿಂದ ಕೋಟೆಯ ಬುರುಜಿನ ಮೇಲಿದ್ದ ಅರಳಿಮರ ಎಂದೂ ಮಾತನಾಡಿದಂತೆ ಪ್ರಜೆಗಳು ಪುನಃ ಹೇಳಿಕೊಳ್ಳಲಿಲ್ಲ.






ಕಿರಿಯರೇ, ನೀವೆಂದಾದರೂ ತಮಿಳು ನಾಡಿಗೆ ಹೋದರೆ, ಅಲ್ಲಿ ಗಣಪತಿಯ ಗುಡಿ ಮುಂದೆ ಜನರು ಮೂರು ಮೂರು ಸಲ ಬೈಠಕ್ಕು ಹಾಕಿ ಮೂರು ಸಲ ಮುಷ್ಟಿಯಿಂದ ತಮ್ಮ ತಲೆ ಮೊಟ್ಟಿಕೊಂಡು ಕೆನ್ನೆ ಬಡಿದುಕೊಂಡು ತಮ್ಮ ಭಕ್ತಿ ತೋರಿಸುವುದನ್ನು ನೋಡಬಹುದು. ಈ ಪದ್ಧತಿ ನಮಗೆಲ್ಲಾ ವಿಚಿತ್ರವಾಗಿ ಕಂಡರೂ ಅದು ಅಲ್ಲಿ ಆಚರಣೆಗೆ ಬರಲು ಒಂದು ಪೂರ್ವ ಕಥೆ ಇದೆ. ಅದು ಈ ರೀತಿ—

ಪೂರ್ವಕಾಲದಲ್ಲಿ ಗಜಮುಖನೆಂಬ ರಾಕ್ಷಸನಿದ್ದ. ಅವನಿಗೆ ಆನೆಯಂತಹ ಮುಖ ಇದ್ದುದರಿಂದ ಆ ಹೆಸರು ಬಂದಿತೆಂದು ಹೇಳುವರು. ಆತ ಉಗ್ರತಪಸ್ಸು ಮಾಡಿ, ಶಿವನನ್ನು ಪ್ರತ್ಯಕ್ಷಮಾಡಿಸಿಕೊಂಡು ತನಗೆ ಸಾವಿಲ್ಲದಂತೆ ವರ ಪಡೆದುಕೊಂಡ.

ಅಂದಿನಿಂದ ಅವನ ಗರ್ವ, ಅಹಂಕಾರಗಳು ಮಿತಿಮೀರಿದವು. ಅವನು ತನ್ನ ರಾಕ್ಷಸ ಸಮೂಹ ದೊಡಗೂಡಿ ದೇವೇಂದ್ರನ ಮೇಲೆಯೇ ದಂಡೆತ್ತಿ ಹೋದ. ದೇವತೆಗಳು ಅವನ ದುಷ್ಟ ಶಕ್ತಿಯ ಮುಂದೆ ನಿಂತು ಯುದ್ಧ ಮಾಡಲಾರದೇ ಹೋದರು. ಅಂದಿನಿಂದ ರಾಕ್ಷಸರಿಗೆ ದೇವತೆಗಳೆಂದರೆ ತುಂಬಾ ಅಸಡ್ಡೆಯಾಗಿ, ಅವರನ್ನು ಬಾಧೆ ಪಡಿಸಲುಪಕ್ರಮಿಸಿದರು.

ಈ ಹಿಂಸೆಗಳನ್ನು ತಡೆಯಲಾರದೆ ದೇವೇಂದ್ರನು ಗಜಮುಖನೊಂದಿಗೆ "ಎಲೈ ಗಜಮುಖನೇ, ನಾವು ಸಹೋದರರಂತಿದ್ದೇವೆ. ಹೊಡೆದಾಡಿಕೊಳ್ಳುವುದು ಚೆನ್ನಾಗಿ ಕಾಣುವುದಿಲ್ಲ. ನಿನಗೆ ಸ್ವರ್ಗವನ್ನು ಆಳಬೇಕೆಂಬ ಅಪೇಕ್ಷೆಯಿದ್ದರೆ, ಹಾಗೆಯೇ ಆಗಲಿ; ನಾನು ಅಡವಿಗೆ ಹೋಗಿ ತಪಸ್ಸು ಮಾಡುತ್ತಾ ವಿಶ್ರಾಂತಿ ಪಡೆಯುತ್ತೇನೆ" ಎಂದು ವಿರಕ್ತಿಗೊಂಡವನಂತೆ ನಟಿಸಿದ.

ಅದಕ್ಕೆ ಗಜಮುಖನು "ನೀನೆಲ್ಲಿಗೂ ಹೋಗಬೇಕಾಗಿಲ್ಲ. ನಾನು ಹೇಳಿದ ಕೆಲಸ ಮಾತ್ರ ಮಾಡುತ್ತಿರಬೇಕು" ಎಂದ.

ಗಜಮುಖನ ಔದಾರ್ಯಕ್ಕೆ ದೇವಲೋಕದಲ್ಲಿರುವವರೆಲ್ಲರೂ ಸಂತೋಷಗೊಂಡರು. ಆದರೆ ಅವನ ತಂತ್ರವನ್ನು ಕಂಡು ಹಿಡಿಯದೆ

ಕಮಲಪ್ರಿಯ, ಮದರಾಸು



ಹೋದರು. ಒಬ್ಬರಿಗೆ ತಿಳಿಯದಂತೆ ಮತ್ತೊಬ್ಬರನ್ನು ತನ್ನ ಹತ್ತಿರಕ್ಕೆ ಬರಮಾಡಿಕೊಂಡು, ತನ್ನ ಪರಿವಾರದ ಮುಂದೆ ದೇವತೆಗಳೆಲ್ಲರಿಂದ ಪ್ರತಿದಿನ ಬೈಟಕ್ಕು ಹಾಕಿಸುತ್ತಿದ್ದನು. ಆ ಅವಮಾನವನ್ನು ತಡೆಯಲಾರದೆ ದೇವತೆಗಳು ಶಿವನಲ್ಲಿ ಮೊರೆಯಿಟ್ಟರು.

ಆಗ ಶಿವನು ತನ್ನ ಹಿರಿಯ ಕುಮಾರನಾದ ವಿನಾಯಕನನ್ನು ಕರೆದು "ಮಗೂ, ನಯದಿಂದಲೋ, ಭಯದಿಂದಲೋ ನೀನು ಗಜಮುಖನ ಸೊಕ್ಕು ಮುರಿದು, ದೇವಲೋಕದಲ್ಲಿರುವ ದೇವತೆಗಳಿಗೆ ಇನ್ನುಮೇಲೆ ಯಾವ ವಿಧವಾದ ಬಾಧೆಯೂ ಉಂಟಾಗದಂತೆ ಮಾಡಬೇಕು" ಎಂದು ಹೇಳಿ ಕಳುಹಿದ.

ವಿನಾಯಕನೆಂದಕೂಡಲೇ ಅಗಸರವನಂತೆ ಬೊಜ್ಜುಳ್ಳ, ಕೂತರೆ ಏಳಲಾರದ ಗಣಪತಿ, ಗಜಮುಖನ ಸೊಕ್ಕು ಅಡಗಿಸುವುದೆಂದರೇನು ಎಂದು ಎಲ್ಲರೂ ಆಶ್ಚರ್ಯಪಡಬಹುದು. ಆದರೆ ಕೆಲಸಬಿತ್ತೆಂದರೆ ಅತಿಪರಾಕ್ರಮದಿಂದ ಯುದ್ಧಮಾಡಬಲ್ಲ ನಮ್ಮ ವಿನಾಯಕ. ನಿಜಸ್ಥಿತಿ ಹಾಗಿರುವಾಗ ಗಜಮುಖನ ಹಾವಳಿಯನ್ನು ಅಡಗಿಸುವುದು ಗಣಪತಿಗೆ ಮಹಾ ಕಾರ್ಯವಲ್ಲ.

ವಿನಾಯಕನು ಗಜಮುಖನ ಹತ್ತಿರಕ್ಕೆ ಹೋಗಿ "ಅಯ್ಯಾ, ನೀನು ತಕ್ಷಣ ಸ್ವರ್ಗವನ್ನು ಬಿಟ್ಟು ನಿನ್ನ ಲೋಕಕ್ಕೆ ಹೋಗಿಬಿಡು" ಎಂದು ಎಚ್ಚರಿಸಿದ. ಅದಕ್ಕೆ ಗಜಮುಖ ಹಿಯ್ಯಾಳಿಸಿ ಹುಂಕರಿಸಿದ.

ಗಣಪತಿಗೆ ಕೋಪ ಬಂತು. ಇವನನ್ನು ಕ್ಷಮಿಸಲೇ ಕೂಡದೆಂದು ಮನಸ್ಸು ಮಾಡಿದ. ಅವರಿಬ್ಬರಿಗೆ ಘೋರವಾದ ಯುದ್ಧವಾಯಿತು. ಗಣಪತಿ ತನ್ನ ಹತ್ತಿರವಿದ್ದ ಆಯುಧ, ಅಸ್ತ್ರಗಳನ್ನೆಲ್ಲಾ ಉಪಯೋಗಿಸಿಬಿಟ್ಟ. ಸೂರ್ಯಭಗವಾನನ ಮಾವನಾದ ವಿಶ್ವಕರ್ಮ ಪತ್ಯೇಕವಾಗಿ ಈ ಯುದ್ಧಕ್ಕಾಗಿಯೇ ತಯಾರುಮಾಡಿ ಕೊಟ್ಟ ಆಯುಧವನ್ನು ಉಪಯೋಗಿಸಿದ ಪ್ರಯೋಜನವೇನೂ ಕಾಣದಾಯಿತು. ಕೊನೆಗೆ ಗಣೇಶ ಉಗ್ರನಾಗಿ ತನ್ನ ಎರಡು ದಂತಗಳಲ್ಲಿ ಒಂದನ್ನು ಲಟಕ್ಕನೆ ಮುರಿದು ಮಂತ್ರಿಸಿ, ಅದನ್ನು ಗಜಮುಖನ ಮೇಲೆ ಬಿಟ್ಟ. ಚೂಪುಮೊನೆಯುಳ್ಳ ಆ ಮಂತ್ರಿಸಿದ ದಂತ ಅಂಕುಶದ ಹಾಗೆ ತಿವಿದು ಅವನ ದೇಹವನ್ನು ಚುಚ್ಚಿ, ಗಾಯಮಾಡುತ್ತಿತ್ತು. ಆ ತಿವಿತಗಳಿಂದ ಮೈ



ಯೆಲ್ಲಾ ತೂತುಗಳಾಗಿ ರಕ್ತದ ಕಾಲುವೆ ಪ್ರವಹಿಸಲು ಹೊಡೆತ ತಾಳಲಾರದೆ ಗಜ ಮುಖ ಓಡಲು ಪ್ರಾರಂಭಿಸಿದ. ಆಗಲೂ ಆ ದಂತದ ಚೂರು ಅವನನ್ನು ಬಿಡಲಿಲ್ಲ. ದಾರಿಯಲ್ಲೊಂದು ಇಲಿಯ ಬಿಲ ಕಾಣಿಸಲು ಜೀವವುಳಿದರೆ ಸಾಕೆಂದು ಗಜಮುಖ ಇಲಿಯ ರೂಪ ತಾಳಿ ಆ ಬಿಲದಲ್ಲಿ ಸೇರಿ ಕೊಂಡ.

ಮಂತ್ರ ದಂತ ಅಲ್ಲಿಗೇ ಬಿಡಲಿಲ್ಲ. ಬಿಲ ವನ್ನು ತೋಡಿ ಇಲಿಯ ರೂಪದಲ್ಲಿದ್ದ ಗಜ ಮುಖನನ್ನು ಹೊರಕ್ಕೆ ಎಳೆದು, ತನ್ನ ಒಡೆಯ ನಾದ ಗಣೇಶನ ಮುಂದೆ ಬೀಳಿಸಿತು.

ಆಯಾಸದಿಂದ ಬಿದ್ದಿದ್ದ ಆ ಇಲಿಯನ್ನು ನೋಡಿ ಗಣಪತಿಗೆ ಕನಿಕರವುಂಟಾಯಿತು. "ಎಲೈ ಗಜಮುಖನೇ, ದೇವತೆಗಳನ್ನು ಬಾಧೆ ಪಡಿಸುವವರು ಎಂತಹ ಶಿಕ್ಷೆಗೆ ಗುರಿಯಾಗು ವರೆಂದು ಅನುಭವವಾಯಿತಲ್ಲವೇ ? ಇನ್ನು ಮುಂದಾದರೂ ಬುದ್ಧಿ ತಂದುಕೊಂಡು ನಿನ್ನ ಲೋಕಕ್ಕೆ ನೀನು ಹೋಗಿ ಸುಖವಾಗಿ ಜೀವಿಸು" ಎಂದು ಬುದ್ಧಿ ಹೇಳಿದ.

ಆಗ ಗಜಮುಖನು "ಮಹಾನುಭಾವ, ಗಣೇಶಾ! ಬೇಕಾದರೆ ನಾನು ನಿನಗೆ ದಾಸೋಹಂ ಎನ್ನುತ್ತೇನೆ. ದಾಸನಾಗು ತ್ತೇನೆ. ಆದರೆ ನಾನು ದೇವತೆಗಳ ಮೇಲೆ ಸೇಡು ತೀರಿಸಿಕೊಳ್ಳುವ ವಿಷಯದಲ್ಲಿ ಮಾತ್ರ ಅಡ್ಡಿ ಮಾಡಬೇಡ. ಅವರು ಹಿಂದೆ ನಮ್ಮವ ರಿಗೆ ಕೊಟ್ಟ ತೊಂದರೆಗಳಿಗೆ ಪ್ರತಿಯಾಗಿ ಬೈಟಕ್ಕು ಹಾಕಿಯೇ ತೀರಬೇಕು. ತಪ್ಪುವಂ ತಿಲ್ಲ" ಎಂದು ಪ್ರಾರ್ಥಿಸಿದ.

ದುರ್ಮಾರ್ಗನಾದರೂ ಗಜಮುಖನು ಹೊರಗೆಡವಿದ ವೇದನೆಯಲ್ಲಿ ಸತ್ಯವಿದೆ ಯೆಂದು ಗಣಪತಿ ಗ್ರಹಿಸಿದ. ಅವನಲ್ಲಿ ನೀತಿ ನಿಯಮಗಳಿಗೆ ಕಟ್ಟು ಬೀಳುವ ಸುಗುಣವೂ ಇರುವುದೆಂದು ಕಂಡು ಹಿಡಿದ. ಅದರಿಂದ "ಗಜಮುಖನೇ, ನಿನ್ನ ಹೃದಯದಲ್ಲಿರುವ ಸಂಕಟ ನನಗೆ ತಿಳಿಯಿತು. ನಿನ್ನಿಷ್ಟಪ್ರಕಾರ ದೇವತೆಗಳೆಲ್ಲರೂ ನಿನ್ನ ಮುಂದೆ ಬೈಟಕ್ಕು ಹಾಕುವ ಏರ್ಪಾಟು ನಾನು ಮಾಡುತ್ತೇನೆ. ನಿನ್ನ ಸೇಡು ತೀರಿಸಿಕೊಳ್ಳಬಹುದು. ಆದ ರೊಂದು ಮಾತು. ನೀನು ನನ್ನ ದಾಸ ನಾಗಲು ಮಾತು ಕೊಟ್ಟೆ. ಆ ಮಾತು ಉಳಿ ಸಿಕೊ" ಎಂದು ಕೇಳಿದ.

"ಅಗತ್ಯವಾಗಿ; ನಿಮ್ಮ ಆಜ್ಞೆ ಶಿರಸಾ ವಹಿಸುವೆನು" ಎಂದು ತುಂಬಿದ ಹೃದಯ ದಿಂದ ಒಪ್ಪಿಕೊಂಡ ಗಜಮುಖ.

"ನನಗೆ ವಾಹನವಿಲ್ಲದುದರಿಂದ ನೀನು ಈ ಇಲಿಯ ರೂಪದಲ್ಲೇ ನನ್ನ ವಾಹನವಾಗಿರ ಬೇಕೆಂದು ನನ್ನ ಆಸೆ" ಎಂದ ಗಣೇಶ. ಗಣಪತಿಯ ಅಪ್ಪಣೆಯಂತೆ ಗಜಮುಖನು ಇಲಿಯಾಗಿ ಗಣಪತಿಯ ವಾಹನವಾದ.

ದುಷ್ಟನಾದ ಗಜಮುಖನ ಸೊಕ್ಕು ಮುರಿದು ವಿನಾಯಕನು ಮರಳಿ ಬರು ತ್ತಿರುವನೆಂಬ ಸುದ್ಧಿ ತಿಳಿದ ಕೂಡಲೇ ಆತ ನನ್ನು ಸ್ತುತಿಸಲು ದೇವೇಂದ್ರಾದಿಗಳೆಲ್ಲರೂ ಕೈಲಾಸಕ್ಕೆ ಬಂದು ಕಾದುಕೊಂಡಿದ್ದರು.

ಆಗ ನಂದಿಕೇಶ್ವರನು ದೇವತೆಗಳೊಂ ದಿಗೆ "ನೀವು ಗಣಪತಿಯ ಮುಂದೆ ಸ್ತೋತ್ರ ಗಳೂ, ಮಂತ್ರಗಳೂ ಪಠಿಸಿದರೆ ಆತ ಮೆಚ್ಚುವುದಿಲ್ಲ. ನಿಶ್ಶಬ್ದವಾಗಿ ಒಬ್ಬೊಬ್ಬರೇ ದರ್ಶನಮಾಡಿಕೊಂಡು ಭಕ್ತಿಪೂರ್ವಕವಾಗಿ ಕಿವಿ ಹಿಡಿದು ಬೈಟಕ್ಕು ಹಾಕಿ ಮೂರು ಮೂರು ಸಲ ತಲೆ ಮೊಟ್ಟಿಕೊಂಡು ಮೂರು ಮೂರು ಸಾರಿ ಕಪಾಳಕ್ಕೆ ಬಡಿದುಕೊಳ್ಳ ಬೇಕು. ವಿನಾಯಕನು ಸಂತೋಷಪಡ ಬೇಕೆಂದರೆ ಇದೇ ನೀವು ಮಾಡಬೇಕಾದ ಕೆಲಸ" ಎಂದು ಹೇಳಿದ.

ಇದಕ್ಕೆ ಅವರು "ಬೈಟಕ್ಕು, ಕಪಾಳ ಮೋಕ್ಷಗಳು ಈಗಲೂ ತಪ್ಪಲಿಲ್ಲವೆ?" ಎಂದು ಆಶ್ಚರ್ಯ ಗೊಂಡರು. ಆಗ ಇದರ ಒಳ ಗುಟ್ಟನ್ನು ಅರಿತ ಕೆಲ ಬುದ್ಧಿವಂತರು "ಎಲೈ ಯುವಕರೇ, ಆ ಬೈಟಕ್ಕಿಗೂ, ಈ ಬೈಟಕ್ಕಿಗೂ ಭೇದವಿಲ್ಲವೇ? ಬಲಾತ್ಕಾರ ದಿಂದ ಹೊಡೆಯುವ ಬೈಟಕ್ಕು ಅವು; ಭಕ್ತಿ ಯಿಂದ ಹೊಡೆಯುವ ಬೈಟಕ್ಕು ಇವು. ಗಜ ಮುಖನೆಂದರೆ ಸಾಮನ್ಯನೇನಲ್ಲ. ಈಶ್ವರನ ಭಕ್ತ. ಅದರಿಂದಲೇ ಗಣೇಶನ ಕಟಾಕ್ಷ ಹೊಂದಿ ಆತನಿಗೆ ವಾಹನವಾಗಿ ಕುಳಿತಿ ದ್ದಾನೆ" ಎಂದು ಹೇಳಿದ ಕೂಡಲೇ ದೇವತೆ ಗಳೆಲ್ಲರೂ ಆನಂದದಿಂದ ಮೂಷಕವಾಹನಾ ರೂಢನಾದ ಗಣಪತಿಯಮೇಲೆ ಪುಷ್ಪವರ್ಷ ವನ್ನು ಸುರಿಸಿದರು.

ಅಂದಿನಿಂದ ಗಣಪತಿಯ ವಿಗ್ರಹದ ಮುಂದೆ ಕಿವಿ ಹಿಡಿದುಕೊಂಡು ಬೈಟಕ್ಕು ಹಾಕಿ ಮೊಟ್ಟಿಕೊಂಡು, ಕೆನ್ನೆಗೆ ಹಾಕಿ ಕೊಳ್ಳುವುದು ದೇವಲೋಕದಲ್ಲೂ, ಭೂ ಲೋಕದಲ್ಲೂ ವಾಡಿಕೆ ಆಯಿತೆನ್ನುವರು.



## ಸರ್ಪಕ್ಕೂ ಗರುಡಪಕ್ಷಿಗೂ ವೈರ



# ಏಕೆ-ಗೊತ್ತೆ?

ಪೂರ್ವಕಾಲದಲ್ಲಿ ಪುಣ್ಯಕೋಟಿ ಅಂತ ಒಬ್ಬ ಬೇಟೆಗಾರನಿದ್ದ. ಆತ ವಿಷ್ಣುಭಕ್ತ. ಒಂದು ಸಾರಿ ಪುಣ್ಯಕೋಟಿ ಬೇಟೆಗೆ ಹೋಗಿ ತಿಂಗಳಾದರೂ ಮನೆಗೆ ಬರಲಿಲ್ಲ. ಇದೇ ಸಮಯವೆಂದು ಪಾತಾಳಲೋಕದಲ್ಲಿದ್ದ ನಾಗರಾಜನು ಪುಣ್ಯಕೋಟಿಯ ಮನೆಗೆ ಹೋಗಿ ಏಕಾಂಗಿಯಾಗಿದ್ದ ಆತನ ಹೆಂಡತಿಯನ್ನು ರಥದಲ್ಲಿ ತನ್ನ ಅರಮನೆಗೆ ಕರೆದುಕೊಂಡು ಹೋದ. ಅಲ್ಲಿ ತನ್ನ ಮಂತ್ರಶಕ್ತಿಯಿಂದ ಆಕೆಯನ್ನು ಒಂದು ಸರ್ಪವಾಗಿ ರೂಪಾಂತರಗೊಳಿಸಿದ.

ಕೆಲ ಸಮಯಕ್ಕೆಲ್ಲಾ ಆಡಲು ಹೋಗಿದ್ದ ಪುಣ್ಯಕೋಟಿಯ ಮಗ ಮನೆಗೆ ಬಂದು ಹುಡುಕಿದ. ತಾಯಿ ಕಾಣಿಸಲಿಲ್ಲ. ದಿಕ್ಕು ತೋರದೆ ಅಳುತ್ತಾ ಅಡವಿಯ ಮಾರ್ಗವಾಗಿ ಹೋಗಿ ಒಂದು ಆಲದಮರದ ಕೆಳಗೆ ಕೂರಲು ಅಲ್ಲಿ ಒಂದು ದೊಡ್ಡ ಹುತ್ತ ಕಾಣಿಸಿತು. ಅವನು ಆ ಹುತ್ತದಲ್ಲಿ ಹಾರಿದ.

ಹುಡುಗ ಹೇಗೋ ನಾಗಲೋಕವನ್ನು ಸೇರಿಕೊಂಡ. ಆ ಲೋಕದಲ್ಲಿ ಎಲ್ಲಿ ನೋಡಿದರೂ ಹಾವುಗಳೇ! ಮಾನವರೇ ಇಲ್ಲ. ಅದರಿಂದ ಭಯಪಟ್ಟು ಹಾಗೇ ನಿಂತಿರುವಾಗ ಕೆಲ ಸರ್ಪಗಳು ಬಂದು, ಮಾನವ ಸ್ವರದಲ್ಲಿ ಅವನನ್ನು ಪ್ರಶ್ನಿಸಿದವು. ಸರ್ಪಗಳೆಂದರೇನು? ಮಾತನಾಡುವದೆಂದರೇನು? ಎಂದು ಬಾಲಕನು ಆಶ್ಚರ್ಯ ಹೊಂದಿ, ತನ್ನ ತಾಯಿಯ ಸುಳುವು ಹೇಳಬಲ್ಲಿರಾ ಎಂದು ಕೇಳಿದ.

ಅದಕ್ಕೆ ಸರ್ಪಗಳು ಮರುಕಗೊಂಡು, ಬಾಲಕನೇ, "ಇಂದು ಬೆಳಗ್ಗೆ ನಮ್ಮ ನಾಗರಾಜನು ಒಬ್ಬ ಸ್ತ್ರೀಯನ್ನು ಕರೆದುಕೊಂಡು ಬಂದುದನ್ನು ಮಾತ್ರ ಕಂಡೆವು. ಬೇಕಾದರೆ ಅರಮನೆಗೆ ದಾರಿ ತೋರಿಸುತ್ತೇವೆ. ಆಕೆ ಈಗ ಸರ್ಪವಾಗಿ ಬದಲಾಯಿಸಿದ್ದಾಳಲ್ಲಾ ಕಂಡು ಹಿಡಿಯಬಲ್ಲೆಯಾ?" ಎಂದವು.

ಅದಕ್ಕೆ ಹುಡುಗ "ನನಗೆ ದಾರಿ ತೋರಿಸಿ. ನಾಗರಾಜನನ್ನು ಬೇಡಿ ನನ್ನ ತಾಯಿಯನ್ನು ನೋಡುವೆನು" ಎಂದ.

ಸರಿ ಎಂದು ಆ ಸರ್ಪಗಳು ನಾಗರಾಜನ ಅರಮನೆಗೆ ದಾರಿ ತೋರಿಸಿದವು. ಅವನು ಅರಮನೆಯಲ್ಲಿ ಕಾಲಿಟ್ಟ ಕೂಡಲೇ ಸರ್ಪ ರೂಪ ತಾಳಿದ್ದ ಆತನ ತಾಯಿ ಅವಸರ

ದಿಂದ ಎದುರಾಗಿ ಬಂದಳು. ಇದನ್ನು ಕಂಡು ನಾಗರಾಜ ಆ ಬಾಲಕನನ್ನು ಸರ್ಪವಾಗಿ ಬದಲಾಯಿಸಿದ. ತಾಯಿ ಮಕ್ಕಳು ಈ ರೀತಿ ಸರ್ಪಗಳಾಗಿ ನಾಗರಾಜನ ಅರಮನೆಯಲ್ಲಿದ್ದರು.

ಇಷ್ಟರಲ್ಲಿ ಬೇಟೆಗೆ ಹೋಗಿದ್ದ ಪುಣ್ಯಕೋಟಿ ಮನೆಗೆ ಬಂದು ನೋಡಲು, ಪತ್ನಿಯೂ ಇಲ್ಲ, ಪುತ್ರನೂ ಇಲ್ಲ. ಪುಣ್ಯಕೋಟಿ ಯೋಚಿಸಿದ; ರಥದ ಚಕ್ರಗಳ ಗುರುತು ಕಾಣಿಸಿತು. ಆ ಗುರುತನ್ನು ಹಿಂಬಾಲಿಸಲು ಅರಣ್ಯ, ಅರಣ್ಯದಲ್ಲಿದ್ದ ಆಲದಮರ, ಅದರಡಿ ಹುತ್ತದವರೆಗೆ ಕರೆದುಕೊಂಡು ಹೋಯಿತು. ಗಬಕ್ಕನೆ ಆ ಹುತ್ತದೊಳಕ್ಕೆ ಹಾರಿ, ನಾಗಲೋಕ ಸೇರಿಕೊಂಡ.

ಆತನನ್ನು ಕಂಡ ಕೂಡಲೇ ನಾಗರಾಜ ಓಡಿ ಬಂದು ಆತನೊಂದಿಗೆ ಯುದ್ಧ ಹೂಡಿದ. ಇಬ್ಬರಿಗೂ ಭಯಂಕರ ಯುದ್ಧ ನಡೆಯುತ್ತಿರುವ ಸಮಯದಲ್ಲಿ ಸರ್ಪರೂಪದಲ್ಲಿದ್ದ ಪುಣ್ಯಕೋಟಿಯ ಪತ್ನಿ, ಪುತ್ರನೂ ಸಹ ಓಡಿ ಬಂದು ಆತನ ಕಾಲಿಗೆ ಸುತ್ತಿಕೊಂಡರು. ಅವರು ತನ್ನ ಪತ್ನಿ ಪುತ್ರರೇ ಎಂದು ಗ್ರಹಿಸಿ, ಪುಣ್ಯಕೋಟಿ ತನ್ನ ಇಷ್ಟ ದೈವವಾದ ವಿಷ್ಣುವನ್ನು ಸ್ಮರಿಸಿ, ಅವರನ್ನು ಸ್ಪರ್ಶಿಸಿದ ಕೂಡಲೇ ಅವರು ಗರುಡಪಕ್ಷಿಗಳಾಗಿ ಬದಲಾಯಿಸಿದರು.

'ಇವನು ಯಾರೋ ಅಸಾಧ್ಯನಂತೆ ಕಾಣಿಸುತ್ತಾನೆ' ಎಂದು ನಾಗರಾಜ ಆಶ್ಚರ್ಯಪಡುತ್ತಿರುವಲ್ಲಿ, ಪುಣ್ಯಕೋಟಿಯೂ ಸಹ ಒಂದು ಗರುಡಪಕ್ಷಿಯ ಹಾಗೆ ಬದಲಾಯಿಸಿ ನಾಗರಾಜನನ್ನು ಚೂಪಾದ ಉಗುರುಗಳಿಂದ ಹಿಡಿದುಕೊಳ್ಳಲು ಹೋದ. ಆದರೆ ಕ್ಷಣ ಮಾತ್ರದಲ್ಲಿ ನಾಗರಾಜನೂ, ನಾಗಗಳೂ ಮಾಯವಾದರು. ಇವರು ಹೊರಗೆ ಬರಲಾರರೇ ಎಂದು ಪುಣ್ಯಕೋಟಿ ಪಕ್ಷಿರೂಪದಿಂದ ಎಷ್ಟು ದಿನ ಕಾದರೂ ಅವರು ಹೊರಗೆ ಬರಲಿಲ್ಲ. ಆಗ ಪುಣ್ಯಕೋಟಿ "ನಿನ್ನ ದುರ್ನಡತೆಗೆ ತಕ್ಕ ಶಾಸ್ತಿ ಮಾಡುವವರೆವಿಗೂ ನಾನು ನಿದ್ದೆ ಮಾಡುವುದಿಲ್ಲ" ಎಂದು ಶಪಥ ಮಾಡಿದ.

ಗರುಡಪಕ್ಷಿ ರೂಪದಲ್ಲೇ ಆತನೂ, ಆತನ ಕುಟುಂಬವೂ ಅಂದಿನಿಂದ ಹಾವುಗಳನ್ನು ಹುಡುಕಿ, ಬೆನ್ನಿಟ್ಟಿ ಕಬಳಿಸಲಾರಂಭಿಸಿದರು. ಅದರಿಂದ ಗರುಡ ಹಾವುಗಳಿಗೆ ಜಾತಿವೈರ ಬೆಳೆಯಿತು.



## ★ ಹೋಲಿಕೆ ★



ಕೆಳಗೆ ನಾಲ್ಕು ಮೂಲೆಗಳಲ್ಲೂ ನಾಲ್ಕು ಬೆಕ್ಕುಗಳು ಮಧ್ಯದ ಇಲಿಯನ್ನು ಹಿಡಿಯಲು ಹೊಂಚು ಹಾಕುತ್ತಿವೆ. ಆದರೆ ಒಂದು ಬೆಕ್ಕಿಗೆ ಮಾತ್ರ ದಾರಿ ಸಿಕ್ಕುತ್ತೆ. ಅದು ಯಾವುದು ಕಂಡು ಹಿಡಿಯುವಿರಾ ?



## ಒಗಟುಗಳು

ಇವುಗಳೇನು ಹೇಳಬಲ್ಲಿರಾ ?

1. ಬಾ ಬಾ ಎಂದು ಬಣ್ಣಿಸಿ ಕರೆವರು,
ರೊಕ್ಕವ ಕೊಟ್ಟು ಇಕ್ಕಿಕ್ಕೆನುವರು,
ಇಕ್ಕುವಾಗ ಅಳುವರು,
ಇಕ್ಕಿದಮೇಲೆ ನೋಡಿ ನಗುವರು.
2. ಎತ್ತಿದರೆ ಧಡಿಯು, ಮುಟ್ಟಿದರೆ ಮುಳ್ಳು.

— ಬೇ. ನ. ಗೋಪಾಲರಾವ್

3. ನೋಡಿದರೆ ನೋಡುವುದು
ನೋಡದಿರೆ ನೋಡದು
ರೂಢಿಯೊಳು ಸರ್ವತ್ರ ನೆಲೆಸಿಹುದು
4. ಅಂಡದಲಿ ಹುಟ್ಟಿದೆನು
ವೈರಿಗಳ ಹಿಂಡಿನಲಿ ಬೆಳೆದೆನು
ಮಾಮರಗಳ ತಂಡದಲಿ ಹಾಡಿದೆನು
ಕವಿಗಳ ಕವನದಲಿರುತಿಹೆನು.

— ಕೊ. ಶೆ. ವೀರಣ್ಣ

5. ಮೂರುಜನ ಮುಂಡೇರು ಬಿಸಿಲು
ಬಂದಾಗ ಮುಸುಕು ತೆಗೆಯುತ್ತಾರೆ.

— ಶ್ರೀನಿವಾಸ್

6. ಕಡೆಕಪ್ಪು ನಡುಬಿಳಿದು,
ಉಡುವ ವಸ್ತ್ರವಿದಲ್ಲ
ಬಿಡದೆ ನೀರುಂಟು ಮಡುವಲ್ಲ
7. ಹತ್ತುಸಾವಿರ ಕಣ್ಣು, ನೆತ್ತಿಲಾದರೂ ಬಾಲ
ಹುತ್ತಿನ ಹುಳುವ ಹಿಡಿದು ತಿನ್ನುವುದು

— ಬಿ. ಅನಂತಪದ್ಮನಾಭ

8. ತಿಂಡಿಗೆ ಕಡಿಮೆಯಿಲ್ಲ
ತೀರ್ಥ ಕುಡಿದರೆ ಸಾವು
9. ಹೊಂಚಿರುವ ದೆವ್ವ
ಹೋದಕಡೆಗೆಲ್ಲಾ ಬರುತ್ತೆ.
10. ನೆಲಪುರ, ನೆಲಪುರದಮೇಲೆ
ಕಂಚಿಪುರ, ಕಂಚಿಪುರದಮೇಲೆ
ಶ್ವೇತಪುರ, ಶ್ವೇತಪುರದಲ್ಲಿ
ಐದುಜನ ಕುಣಿಯುತ್ತಾರೆ.

— ರಾಧಾಕೃಷ್ಣ ಕಾಮತ್

## ಹುಲಿಯೂ ನರಿಯೂ ★ ★ ಕೆ. ಗಣಪತಿ ಭಟ್ಟ, ಮಂಗಳೂರು.

ಒಂದು ಕಾಡಿನಲ್ಲಿ ಒಂದು ಹುಲಿಯಿತ್ತು. ಅದಕ್ಕೆ ಆಹಾರ ಸಿಕ್ಕದೆ ತುಂಬ ಹಸಿವಾಗಿ ಹುಡುಕುತ್ತಾ ಹೋಗಿ ಒಂದು ನರಿಯ ಬಿಲದ ಹತ್ತಿರ ಬಂತು. ಆಗ ಅದರೊಳಗೆ ನರಿ ಇರಲಿಲ್ಲ. ಬೇರೆ ಗತಿ ಕಾಣದೆ ಆ ನರಿ ಬಂದೊಡನೆ ಅದನ್ನಾದರೂ ತಿನ್ನಬೇಕೆಂಬ ಹಂಬಲದಿಂದ ಹುಲಿಯು ಆ ಬಿಲದೊಳಗೆ ಹೊಕ್ಕು ಕುಳಿತಿತು. ಪಾಪ, ರಾತ್ರಿಯೆಲ್ಲಾ ಕಾದು ನೋಡಿತು.

ಬೆಳಗ್ಗೆ ಕೋಳಿ ಕೂಗುವ ಹೊತ್ತಿಗೆ ನರಿಯು ತನ್ನ ಬಿಲದ ಹತ್ತಿರ ಬಂದಾಗ ಅದಕ್ಕೆ ಹುಲಿಯ ಹೆಜ್ಜೆಗಳ ಗುರುತು ಕಂಡಿತು. ಜಾಣ ನರಿಯು ಹೆಜ್ಜೆಯಗುರುತು ಎಲ್ಲಿಗೆ ಹೋಗಿದೆಯೆಂದು ನೋಡಿ ಬಿಲದಲ್ಲೇ ಹುಲಿ ಇರಬೇಕೆಂದು ನೆನೆಸಿತು. ಆದರೆ ಹುಲಿಯು ಅಲ್ಲಿ ನಿಶ್ಚಯವಾಗಿಯೂ ಇದೆ ಎಂದು ತಿಳಿಯುವುದು ಹೇಗೆ? ಹೊರಗೆ ಎಷ್ಟು ಹೊತ್ತು ಕಾಯುವುದು? ಅದಕ್ಕಾಗಿ ಒಂದು ಉಪಾಯಹೂಡಿತು. ಹುಲಿಗೆ ಕೇಳಿಸುವಂತೆ ಗಟ್ಟಿಯಾಗಿ ತನ್ನ ಇನ್ನೊಂದು ಮಿತ್ರ ನರಿಯೊಂದಿಗೆ ಮಾತಾಡುವಂತೆ "ನಾನು ಯಾವಾಗಲೂ ಬಂದು ಈ ಬಿಲವನ್ನು ಕರೆದಾಗ ಅದು ಮಾತನಾಡುವುದು. ಅದು ಮಾತನಾಡಿದರೆ ಮಾತ್ರವೇ ನಾನು ಒಳಗೆ ಹೋಗುವುದು. ಹೌದೋ ಅಲ್ಲವೋ ನೋಡು" ಎಂದು ಹೇಳಿ 'ಓ ಬಿಲ' ಎಂದು ಕರೆಯಿತು. ಬಿಲ ಮಾತನಾಡಲಿಲ್ಲ. ನರಿಯು ಹೀಗೆ ಮೂರು ಬಾರಿ ಕರೆಯಿತು. ಬಿಲದ ಯಾವ ಸುದ್ದಿಯೂ ಇಲ್ಲ. ಹುಲಿಯು ಹೊಂಚುತ್ತಾ ಗಮ್ಮನೆ ಒಳಗೇ ಕುಳಿತಿತ್ತು.

ಆಗ ನರಿಯು 'ನಾನು ಯಾವಾಗಲೂ ಒಂದೇ ಬಾರಿ ಕರೆದಾಗ ಬಿಲವು ಮಾತನಾಡುವುದು. ಈವತ್ತು ಮೂರು ಬಾರಿ ಕರೆದರೂ ಮಾತನಾಡಲಿಲ್ಲ. ಇನ್ನು ಕಡೆಯ ಸರ್ತಿ ಕರೆಯುವೆನು. ಈ ಬಾರಿ ಮಾತನಾಡದೆ ಇದ್ದರೆ ಹೊರಟೇ ಹೋಗುವೆನು' ಎಂದು ಹೇಳಿ 'ಓ ಬಿಲ'ವೆಂದು ಇನ್ನೂ ಜೋರಾಗಿ ಕೂಗಿತು. ಆಗ ಒಳಗಿರುವ ಹುಲಿಯು ಈ ಬಾರಿ ಮಾತನಾಡದೆ ಇದ್ದರೆ ನರಿಯು ಹೊರಟು ಹೋದೀತೆಂಬ ಆಶೆಯಿಂದ 'ಹೂಂ, ಬಾ' ಎಂದಿತು. ನರಿಗಿನ್ನೇನು ಬೇಕು? ಅದು ಗಟ್ಟಿಯಾಗಿ ನಕ್ಕು, 'ಬಿಲವು ಮಾತನಾಡಲಿಕ್ಕೆ ಬಿಲಕ್ಕೆ ಜೀವ ಇದೆಯೇ? ಇದು ಹುಲಿಯೇ ಮಾತನಾಡುವುದು' ಎಂದು ಹೇಳಿ ಓಟಕಿತ್ತಿತು. ಹುಲಿಯು ನಂತರ ಹೊರಗೆ ಬಂದು ತನ್ನ ತಿಳಿಗೇಡಿತನಕ್ಕಾಗಿ ಪಶ್ಚಾತ್ತಾಪಪಡುತ್ತಾ ಹೊರಟು ಹೋಯಿತು.

ಗೂಡು ಜೇನು ಮಯಣ
ಮಯಣದ ಮೇಲೆ ನೊಣ
ಜೇನು ತುಪ್ಪ
ಇರುವುದಪ್ಪ!
ಅದಕೆ ಅದೇ ಹಣ!

—ಕೆ. ಗುಂಡುರಾವು.

ನೋಡು ನೀನಾ ಗುಡ್ಡ
ಅದರ ಮೇಲೊಬ್ಬ ಹೆಡ್ಡ
ಜಗವ ನೋಡಿ
ನಗೆಯ ಬೀರಿ
ಸವರುತ್ತಿದ್ದಾನೆ ಗಡ್ಡ.

—ಹೊಡೆ, ರಾಮರಾವ್.

# ಜಡೆಯ ಹಾಡು

(ಹೆಣ್ಣು ಮಕ್ಕಳಿಗೆ)

ಜಡೆಯನು ಹೆಣೆವಾ ಗೆಳತೀರಾ !
ಅಡಿಗಳ ನಿಡುವಾ ಬನ್ನೀರಾ ॥ ಪಲ್ಲವಿ ॥
ಮಲ್ಲಿಗೆ ಸಂಪಿಗೆ ಸೇವಂತೀ
ಸುಳ್ಳೀ ಜಾಜೀ ಇರುವಂತೀ
ಹೂಗಳ ತೋಟವ ಬೆಳೆಸೋಣ
ಹೂವಿನ ದಂಡೆಯ ಮುಡಿಯೋಣ—

ಮುಳುಗೀ ಮಿಂದೂ ಶುಚಿಯಾಗಿ
ಒಣಗಿಸಿ ಕೂದಲು ಬಿಡುವಾಗಿ
ಎಣ್ಣೆಯ ತೀಡಿ ಮಿದುವಾಗಿ
ಹಣಿಗೆಲಿ ಬಾಚಿ ನಯವಾಗಿ—
ಕಣಕಣ ಕೈಯಾ ಬಳೆಯುಲುಗೇ
ವನಿತೆಗೆ ತನುವಿಗೆ ಚುರುಕಾಗೇ
ಮನೆಗೆಲಸಂಗಳು ಬಿಡುವಾಗೇ
ಹೆಣೆಯುವ ನಾವ್ ಜಡೆಯನು ಹೀಗೇ.

ಕೈಗಳಿಗೆರಡೂ ಬಳೆಚೆಂದ
ಮೈಗೇ ಬಟ್ಟೇ ಬರೆ ಚೆಂದ
ಹಣೆಗೊಂದೂ ಕುಂಕುಮ ಚೆಂದ
ತುಂಬಿದ ತಲೆಯಾ ಜಡೆ ಚೆಂದ.

* * *

ಮೈಮೆಯ ಜಡೆಯಿದು ಕತೆಯುಂಟು
ನಮ್ಮ ಪುರಾಣದ ಒಳಗುಂಟು
ಬಿಚ್ಚಿದ ತಲೆಯು ಭಯಂಕರವು !
ಕಟ್ಟಿದ ಜಡೆ ಬಲು ಸಿಂಗರವು !

ರಾಮಾಯಣದಾ ಕತೆಯಲ್ಲೀ
ರಾವಣ ಬಂದು ಮರೆಯಲ್ಲೀ
ಹಿಡಿದನು ಸೀತೆಯ ಜಡೆಮುಡಿಯಾ
ಮಡಿದನು ರಾವಣ ! ಹೆಣೆ ಜಡೆಯಾ !
ಪಾಂಡವ ಪತ್ನಿಯ ಮುಡಿಯೆಳೆದು
ಕೌರವರಳಿದರು ಜಡೆಯೆಳೆದು !
ಬಿಚ್ಚಿದ ತುರುಬನು ಹಿಡಿದಂದು
ಸತ್ತನು ಕೀಚಕ ಒದೆ ತಿಂದು
ಎಚ್ಚರ ! ಜಡೆ ಸರ್ಪಾಕಾರೀ !
ಕಚ್ಚೀತಾ ಬೈತಲೆಯ ಸಿರೀ !

* * *

ನೇತಾಡುವ ಜಡೆ ಒಂದಂದ !
ಸುತ್ತಿದ ಜಡೆ ಇನ್ನೊಂದಂದ !
ಕವಲಿನ ಜಡೆ ಕಿರಿಯರಿಗಂದ !
ಬಗೆಬಗೆ ಜಡೆ ಬಾಲೆಗೆ ಚಂದ !
ಬೆಳೆಯಲಿ ಕೂದಲು ಸೊಂಪಾಗಿ !
ತಲೆಯಲಿ ಬಾಳಲಿ ತಂಪಾಗಿ !
ತುಂಬಿದ ತಲೆ ನಿತ್ಯವುಗಾಗಿ !
ಬಿಂಬಿಸಲೀಶನ ಮುಂದಾಗಿ !

" ನವಗಿರಿನಂದ "



# ಮಕ್ಕಳ ಬೆಳವಣಿಗೆ

ತಾಯಂದಿರಿಗೆ

ಮಕ್ಕಳ ಶರೀರಪುಷ್ಟಿಗೆ ಲೋಹಾಂಶಗಳು ಸೇರಿರುವಂತಹ ಪದಾರ್ಥಗಳನ್ನು ಕೊಡಬೇಕಾದುದು ಅಗತ್ಯ. ರಕ್ತವೃದ್ಧಿಗೆ ಲಿವರ್ ಕೊಟ್ಟರೆ ಉತ್ತಮ ಕೆಲಸಮಾಡುವುದೆಂದೂ, ಹಾಲು ಕುಡಿಯುವುದರಿಂದ ಮೂಳೆಗಳ ಬೆಳವಣಿಗೆಯಾಗುವುದೆಂದೂ ಅನೇಕರಿಗೆ ತಿಳಿದಿದೆ. ಆದರೆ ಖರ್ಜೂರದಲ್ಲೂ, ಹುಣಿಸೇ ಹಣ್ಣಿನಲ್ಲೂ ಕಬ್ಬಿಣ ಹೆಚ್ಚು ಪ್ರಮಾಣದಲ್ಲಿರುವ ವಿಷಯ ಬಹಳ ಜನರಿಗೆ ತಿಳಿಯದು. ಮಾವೂ, ಸೇಬೂ, ಅಂಜೂರ, ನೇರಳೆ ಇವುಗಳಲ್ಲಿಯೂ ಸಹ ಕಬ್ಬಿಣ ಅಧಿಕಾಂಶದಲ್ಲಿದೆ. ಬೇಲ, ಕಿತ್ತಲೆಯ ಹಲವು ಜಾತಿ ಹಣ್ಣುಗಳು, ಹಲಸಿನ ಹಣ್ಣು ಮುಂತಾದುವುಗಳಲ್ಲಿ ಸುಣ್ಣ (ಕಾಲ್ಸಿಯಂ) ಅಧಿಕವಾಗಿರುವುದು. ಹಿರೇ ನೆಲ್ಲಿಕಾಯಿ 'ಸಿ' ವಿಟಮಿನ್ನಿಗೆ ಹೆಸರುವಾಸಿ.

ಯಾವಾಗಲೂ ಮರದಲ್ಲಿ ಹಣ್ಣಾದ ಫಲಗಳನ್ನು ಭುಜಿಸುವುದು ಶ್ರೇಷ್ಠ. ಅಪಕ್ವವಾದ ಹಣ್ಣುಗಳನ್ನು ಸೇವಿಸಿದರೆ ಒಳಿತು ಮಾಡುವುದಕ್ಕೆ ಬದಲಾಗಿ ಅಜೀರ್ಣಮಾಡಬಹುದು. ಪುಷ್ಟಿ ಕೊಡುವ ಪದಾರ್ಥಗಳು ಹಣ್ಣಿನ ರಸದಲ್ಲಿ ಮಾತ್ರವೇ ಅಲ್ಲದೆ ಮೇಲಿನ ಸಿಪ್ಪೆಯಲ್ಲೂ ಇರುತ್ತವೆ. ಆದ್ದರಿಂದ ಟೊಮೆಟೋ, ಸೇಬು ಮೊದಲಾದುವನ್ನು ಸಿಪ್ಪೆ ತೆಗೆಯದೆ ಹಾಗೆಯೇ ತಿನ್ನುವುದು ಉಚಿತ.

ಫಲಗಳನ್ನು ತೆಗೆದುಕೊಳ್ಳುವಾಗ ಅದರೊಂದಿಗೆ ಸಕ್ಕರೆ ಹಾಕಿಕೊಳ್ಳಕೂಡದು. ತಯಾರು ಮಾಡಿದ ಸಕ್ಕರೆಯಲ್ಲಿ ದ್ರಾವಕಗಳು (ಆಸಿಡ್ಸ್) ಮಿಳಿತವಾಗಿರುವುದರಿಂದ ಅದು ಸೇರಿದರೆ ಫಲಗಳಿಗೆ ಇರುವ ಸತ್ವ ಮಾಯವಾಗಿ ಒಂದೊಂದು ಬಾರಿ ವ್ಯತಿರೇಕವಾಗಲೂ ಬಹುದು. ಕೆಲವುಮಂದಿ ಕೇವಲ ಫಲಗಳ ಆಧಾರದಮೇಲೆಯೇ ಜೀವಿಸುವರೆಂದು ಹೇಳುವರು. ಆದರೆ ಮಾನವಶರೀರ ಪುಷ್ಟಿಗೆ ಫಲಗಳನ್ನು ಮಾತ್ರ ತಿಂದರೆ ಸಾಲದು. ಮಾಂಸಖಂಡಗಳಿಗೆ ಕೊಬ್ಬು, ಲೋಹ, ಲವಣ, ವಿಟಮಿನ್ ಇತ್ಯಾದಿ ಬಗೆಬಗೆಯ ಪದಾರ್ಥಗಳು ಅತ್ಯಗತ್ಯ. ಇವುಗಳೆಲ್ಲವೂ ಇರುವ ಆಹಾರ ಭುಜಿಸಬೇಕು. ಇವುಗಳಲ್ಲಿ ಯಾವುದು ಕಡಿಮೆಯಾದರೂ ಅದು ಪೂರ್ತಿ ಆಹಾರವೆನಿಸಲಾರದು. ಆದ್ದರಿಂದ ಸರ್ವರೂ ಊಟಮಾಡಿದ ತರುವಾಯ ಎರಡು ಔನ್ಸಿನಷ್ಟು ಫಲಗಳನ್ನು ತಿಂದರೆ ಸಾಮಾನ್ಯವಾಗಿ ಸರಿಹೋಗಬಹುದು. ಅಂದಮೇಲೆ ಬೆಳೆಯುವ ಮಕ್ಕಳಿಗೆ ಇವುಗಳ ಅಗತ್ಯವೆಷ್ಟೆಂದು ನೀವೇ ಊಹಿಸಬಹುದು.

ನಿಮ್ಮ ಅಕ್ಕ

# ರಂಗೋಲಿ



ಎಲ್. ಸುಶೀಲ, ರಾಣಿಬೆನ್ನೂರು.



ಎಂ. ಸರೋಜ, ಮೈಸೂರು



ವಿ. ನಾಗರತ್ನ, ತುಮಕೂರು




## ಮತ್ತೊಂದು ವಿಚಿತ್ರ ಇಸ್ಪೀಟು ಟ್ರಿಕ್ಕು

ಈಗ ಹೇಳುವ ಟ್ರಿಕ್ ಅತಿ ಸುಲಭ ಅಷ್ಟೇ ಅಲ್ಲ. ಇಸ್ಪೀಟು ಎಲೆಗಳನ್ನು ನೀನು ಮನೆಯಿಂದ ತಯಾರು ಮಾಡಿಕೊಂಡು ಬರಬೇಕಾದ ತೊಂದರೆಯೂ ಇಲ್ಲ. ಪ್ರೇಕ್ಷಕರ ಹತ್ತಿರ ಇರುವ ಪ್ಯಾಕ್‌ನಿಂದಲೇ ನೀನು ಈ ಗಮ್ಮತ್ತು ಮಾಡಬಹುದು.

ಸಭೆಗೆ ಬರುವ ಪ್ರೇಕ್ಷಕವರ್ಗದಲ್ಲಿ ಯಾರ ಹತ್ತಿರವಾದರೂ ಪ್ಯಾಕ್ ಇದ್ದರೆ ಕೇಳಿ ತೆಗೆದುಕೊ. ತರುವಾಯ ಇನ್ನೊಬ್ಬಾತನನ್ನು ಆ ಪ್ಯಾಕ್‌ನಿಂದ ಒಂಬತ್ತೋ, ಹತ್ತೋ ಎಲೆಗಳನ್ನು ತೆಗೆಯುವಂತೆ ಹೇಳು. ಆಗ ನೀನು ಆ ಒಂಬತ್ತು ಎಲೆಗಳಲ್ಲಿ ಒಂದು ಎಲೆಯನ್ನು ನಿನ್ನ ಅಂಗೈಯಲ್ಲಿಟ್ಟುಕೊಂಡು ಪ್ರೇಕ್ಷಕರಿಗೆ ತೋರಿಸು- ಮಿಕ್ಕ ಎಂಟು ಎಲೆಗಳನ್ನು ಸಹ ತೆಗೆದುಕೊಂಡು ಅಂಗೈಯಲ್ಲಿಟ್ಟು ಎರಡನೆ ಚಿತ್ರದಲ್ಲಿರುವಂತೆ ಜೋಡಿಸು. ನಂತರ ಖಾಲಿಯಾಗಿರುವ ಮತ್ತೊಂದು ಕೈಯನ್ನು ಇಸ್ಪೀಟು ಎಲೆಗಳಿರುವ ಅಂಗೈ ಸುತ್ತಲೂ ತಿರುಗಿಸುತ್ತಾ ಯಾವುದೋ ಮಂತ್ರ ಪಠಿಸುತ್ತಿರುವಂತೆ ನಟಿಸಿ, ಎಲೆಗಳಿರುವ ನಿನ್ನ ಅಂಗೈಯನ್ನು ಎತ್ತಿ ತೋರಿಸು. ಏನು ವಿಚಿತ್ರ! ಒಂದು ಎಲೆಯಾದರೂ ಕೆಳಗೆ ಬೀಳುವುದಿಲ್ಲ! ಪ್ರೇಕ್ಷಕರು ಆಶ್ಚರ್ಯದಿಂದ ಮಿಕಿಮಿಕಿ ನೋಡುತ್ತಿರುವರು. ಸ್ವಲ್ಪ ಸಮಯ ಅವರು ಹಾಗೇ ನೋಡುವಂತೆ ಮಾಡಿ, ಮತ್ತೆ ಎಲೆಗಳನ್ನು ಪ್ರೇಕ್ಷಕನಿಗೆ ಕೊಟ್ಟುಬಿಡು. ಯಾವುದೋ



ಮಂತ್ರಶಕ್ತಿಯಿಂದ ಹೀಗೆ ಮಾಡಿದೆ ಎಂದು ಸಭಿಕರು ತಿಳಿಯುವರೇ ಹೊರತು ಇದರ ರಹಸ್ಯ ಯಾರೂ ತಿಳಿಯಲಾರರು. ರಹಸ್ಯವೆಲ್ಲಾ ಇದು.

ಸಭೆಗೆ ಬರುವ ಮುನ್ನ ನೀನು ಅಂಗೈ ಮಧ್ಯ ಒಂದು ಕೂದಲನ್ನು ಕಟ್ಟಿಕೊಂಡು ಬರಬೇಕು. ಎಷ್ಟೇ ಸೂಕ್ಷ್ಮವಾಗಿ ಪರೀಕ್ಷಿಸಿದರೂ ಪ್ರೇಕ್ಷಕರಿಗೆ ಕಾಣಿಸದಂತೆ ಸಣ್ಣಗೆ ನಿಮ್ಮ ಅಂಗೈ ಬಣ್ಣದಂತಹ ಕೂದಲೇ ಇರ

ಬೇಕು. ಸಭೆಗೆ ಬಂದಮೇಲೆ ಪ್ರೇಕ್ಷಕನ ಹತ್ತಿರದಿಂದ ತೆಗೆದುಕೊಂಡ 9 ಎಲೆಗಳಲ್ಲಿ ಒಂದನ್ನು ಈ ಕೂದಲಿಗೂ, ಅಂಗೈಗೂ ಮಧ್ಯ ಸಿಕ್ಕಿಸಬೇಕು. ಅದನ್ನು ಮಾಡುವ ರೀತಿ ಮೊದಲನೇ ಚಿತ್ರದಲ್ಲಿ ತೋರಿಸಲಾಗಿದೆ. ಮಿಕ್ಕ ಎಂಟು ಎಲೆಗಳನ್ನು ಜೋಡಿಸಿರುವ ರೀತಿ ಎರಡನೇ ಚಿತ್ರದಲ್ಲಿ ನೋಡು. ಹೀಗೆ ಎಲೆಗಳನ್ನು ಜೋಡಿಸಿದನಂತರ ಮೊದಲನೇ ಎಲೆ ಕೆಳಗೆ ಬೀಳದಂತಿರಲು ಕೂದಲು ಆಧಾರವಾಗಿರುವುದು. ಮಿಕ್ಕ ಎಂಟು ಎಲೆಗಳನ್ನು ಮೊದಲನೇ ಎಲೆ ಒತ್ತಿ ಹಿಡಿದಿರುತ್ತದೆ. ಇದೇ ಈ ಟ್ರಿಕ್ಕಿನ ರಹಸ್ಯ.



[ ಈಗಾರುಡಿ ವಿದ್ಯೆಯಲ್ಲಿ ಆಸಕ್ತರಾಗಿ ಉಚಿತ ಸಲಹೆ ಹೊಂದ ಬಯಸುವ ಪಾಠಕರು ನೇರವಾಗಿ ಶ್ರೀ ಸರ್ಕಾರರಿಗೆ ಪತ್ರ ಬರೆಯಿರಿ. ಆದರೆ ಎರಡು ವಿಷಯ ಗಮನಿಸಬೇಕು. 1. ಅವರಿಗೆ ಪತ್ರ ಇಂಗ್ಲಿಷಿನಲ್ಲಿ ಬರೆಯಬೇಕು. 2. ಬರೆಯುವಾಗ ಚಂದಮಾಮದ ಹೆಸರು ನೀವು ಸೂಚಿಸಬೇಕು.]
ಪತ್ತೆ: ಪ್ರೊಫೆಸರ್ ಪಿ.ಸಿ. ಸರ್ಕಾರ್, ಮೆಜೀಷಿಯನ್,
ಪೋಸ್ಟ್ ಬಾಕ್ಸ್ 7878, ಕಲಕತ್ತಾ-12.

## ಪುಟಚಂಡು

ಪಿಟೀಲು ನುಡಿಯಿತು! ಫೋನೋ ಹಾಡಿತು
ಹಾಡೆಲೋ ಪುಟ ಚಂಡೆ.

ಬಾಲರು ಬಂದರು, ಹುಡುಗರು ಜಿಗಿದರು
ಜಿಗಿಯಲೆ! ಪುಟಚಂಡೆ ॥ ಪಲ್ಲ ॥

ಬಾಲರ ಸಿರಿಯೇ! ಭಾಗ್ಯದ ಖಣಿಯೇ!
ಬಾ! ಬಾ! ಎನ್ನಯ ಭಾರತ ಮಾತೆಯ
ಚಿನ್ನದ ಪುಟಚಂಡೆ!

ಬಿದ್ದರು ಬೆದರದೆ, ಗೆದ್ದರು ಹಿಗ್ಗದೆ
ಬಲವನು ಬೆಳಿಸಲು ಭರದಿಂಪುಟಿಯಲೆ!
ಭಪ್ಪರೆ ಪುಟಚಂಡೆ!

ಚಿನ್ನದ ಚಂಡೇ! ರನ್ನದ ಗುಂಡೆ!
ಕನ್ನಡ ನಾಡಿನ ಕೀರ್ತಿಯ ಬೆಳಿಸಲು
ಕುಣಿಯಲೆ ಪುಟಚಂಡೆ!

ನನ್ನಿಯು ಗೆಲ್ಲಲಿ ನಲ್ಮೆಯು ಬೆಳೆಯಲಿ
ಕೋಕಿಲೆ ಹಾಡಲಿ! ದೇಶವು ಬೆಳೆಯಲಿ!
ಕುಣಿಯೆಲೇ! ಪುಟಚಂಡೆ!

ನಗಾರಿ ಢಣ್ ಢಣ್
ನಫೂರಿ ಪೌಂವ್ ಪೌಂವ್
ರಾಷ್ಟ್ರಧ್ವಜವದು ನಾಡೊಳು ಮೆರೆಯಲಿ
ಹಾಡೆಲೆ! ಪುಟಚಂಡೆ!

ಖಾದಿಯು ಹಬ್ಬಲಿ, ಭೇದವು ಅಳಿಯಲಿ
ಕನ್ನಡ ಭೂಮಿಯು ಸುವರ್ಣವಾಗಲಿ
ಸುಳಿಯೆಲೆ ಪುಟಚಂಡೆ!

ದಯೆಯೇ ಧರ್ಮವು, ಧರ್ಮಕೆ ವಿಜಯವು
ಜಯ ಜಯ ಪುಟಚಂಡೆ!
ಶಾಂತಿಯು ಬೆಳೆಯಲಿ, ಕ್ರಾಂತಿಯು ಮೊಳಗಲಿ
ಹಾಡೆಲೆ ಪುಟಚಂಡೆ!

— ಮೃತ್ಯುಂಜಯ, ಹಿರೇಮಠ, ಹುಬ್ಬಳ್ಳಿ

## ಜಾಣ್ಮೆ ಪರೀಕ್ಷೆ

ಒಬ್ಬ ಹೆಂಗಸು ಒಂದು ಕಡೆ ಒಬ್ಬ ಹುಡುಗಿಯನ್ನು ಒಡವೆ ವಸ್ತ್ರ ಹಾಕಿ ಅಲಂಕರಿಸಿ ಎಲ್ಲಿಗೋ ಕರೆದುಕೊಂಡು ಹೋಗುತ್ತಿದ್ದಳು. ಗುರುತಿನವಳೊಬ್ಬಳು ಎದುರಾಗಿ ಸಿಕ್ಕಿ "ಈ ಹುಡುಗಿ ಯಾರು?" ಎಂದು ವಿಚಾರಿಸಿದಳು.

ಅದಕ್ಕೆ ಆ ಹೆಂಗಸು "ನನ್ನ ಮಾವನಿಗೆ ಇವಳ ಮಾವ, ಮಾವ ಎನ್ನುತ್ತಾನೆ. ನಮ್ಮ ಸಂಬಂಧ ನೀನೇ ಯೋಚಿಸಿಕೋ" ಎಂದು ಹೇಳಿ ಲಗುಬಗನೆ ಹೊರಟು ಹೋದಳು. ಹಾಗಾದರೆ ಮಕ್ಕಳಿರಾ ಸಂಬಂಧವೇನೆಂಬುದನ್ನು ನೀವು ಹೇಳಬಲ್ಲಿರಾ?

—ಶ್ರೀಮತಿ ಉಗ್ರಂಕರ್

## ನಗೆ-ಹನಿ

ಒಂದು ಶಾಲೆ ಅಲ್ಲಿ ಶಿಕ್ಷಕಿಯು ವಿದ್ಯಾರ್ಥಿನಿಯರಿಗೆ ಪಾಠ ಹೇಳಿ ಕೊಡುತ್ತಿದ್ದಳು. ಅದೇನು ಪಾಠ ಎಂದರೆ ಕೋಳಿ ಪ್ರಬಂಧ. ಆಕೆ ಒಂದು ಕೋಳಿ ತತ್ತಿ (ಮೊಟ್ಟೆ)ಯನ್ನು ಎಲ್ಲರಿಗೂ ತೋರಿಸಿ "ಮಕ್ಕಳಿರಾ, ಇದು ಹೇಗೆ ದುಂಡಗಿದೆ ನೋಡಿ. ಇದರಿಂದ ಮರಿಗಳು ಹೊರಗೆ ಹೇಗೆ ಬರುತ್ತದೆ ಎಂಬುದು ಆಶ್ಚರ್ಯ, ಅಲ್ಲವೇ" ಎಂದಳು. ಪುಟ್ಟ ಶಾರದೆಗೆ ನಿಜವಾಗಿ ಆಶ್ಚರ್ಯ ಕಾಣಲಿಲ್ಲ. ಅವಳ ಸಮಸ್ಯೆಯೇ ಬೇರೆ. "ಕೋಳಿ ಮರಿ ಅದನ್ನು ಒಡೆದುಕೊಂಡು ಹೊರಗೆ ಬರುವುದು ಆಶ್ಚರ್ಯವೇ ಅಲ್ಲ ಮೇಡಂ. ಅದರೊಳಗೆ ಮರಿ ಹೇಗೆ ಹೊಕ್ಕಿತು ಎಂಬುದೇ ಆಶ್ಚರ್ಯ" ಎಂದಳಂತೆ.

—ಜ. ಬಸವಲಿಂಗ

## ನಿಮಗೆ ಗೊತ್ತಿದೆಯೇ?

1. ಯಾವ ಕುದುರೆ ಏರಲಾಗುವುದಿಲ್ಲ?
2. ಜನರಿಲ್ಲದ ದೇಶವಾವುದು?
3. ಬಾರಿಸಲಾಗದ ತಾಳವಾವುದು?
4. ಧರಿಸಲಾಗದ ಸರವಾವುದು?
5. ಎಲೆಗಳಿಲ್ಲದ ಮರವಾವುದು?
6. ನೀರಿಲ್ಲದ ಸಾಗರವಾವುದು?
7. ತಿನ್ನಲಾಗದ ರಾಗಿ ಯಾವುದು?
8. ಹೂವಾಗದ ಮೊಗ್ಗೆ ಯಾವುದು?

—ಟಿ. ಚಂದ್ರರಾಜ ಸೆಟ್ಟಿ

## ಸೂಚನೆ

ಅಣ್ಣನು ಕರೆದರೆ ಆಟಕೆ
ಅಕ್ಕನು ಕರೆದರೆ ತೋಟಕೆ
ಅಪ್ಪನು ಕರೆದರೆ ಪಾಠಕೆ
ಅಮ್ಮನು ಕರೆದರೆ ಊಟಕೆ
ಅಜ್ಜನು ಕರೆದರೆ ಓಟಕೆ
ಅಜ್ಜಿಯು ಕರೆದರೆ ಕಾಟಕೆ.

—ಬಿ. ಅನಂತಪದ್ಮನಾಭ ರಾವ್

ಗಿಡ್ಡಪ್ಪ ಗಿಡ್ಡ
ಅವನೊಬ್ಬ ಹೆಡ್ಡ
ಉದ್ದಪ್ಪ ಉದ್ದ
ಅವ ಮತ್ತು ಪೆದ್ದ
ಸಣ್ಣಪ್ಪ ಸಣ್ಣ
ಅವ ಕಪ್ಪು ಬಣ್ಣ
ಚಿಕ್ಕಪ್ಪ ಚಿಕ್ಕ
ಅವಮಾತ್ರ ಪಕ್ಕ

—ವಿ. ಕೆ. ಜೋಶಿ,

## ನಗೆ-ಹನಿ

ಭಿಕ್ಷುಕ— ಯಜಮಾನ್ರೇ ಭಿಕ್ಷಾ ಹಾಕಿರಿ.
ಯಜಮಾನ–ಏನೂ ಇಲ್ಲಾಪ್ಪಾ, ನನ್ನಹತ್ತಿರ.
ಭಿಕ್ಷುಕ—ಹಾಗಾದರೆ ನೀವೂ ನನ್ನ ಕೂಡ ಬಂದುಬಿಡಿ, ಸಾಮಿ.

—ಸಿ. ಎಲ್. ಬಿಳಿಗಿ.

ಪೋಲೀಸ—(ಕೈದಿಯನ್ನು ಕುರಿತು) ನಿನಗೆ ಓದಲು ಬರುವುದೇ ?
ಕೈದಿ —ಬರೆಯಲಿಕ್ಕೆ ಬರುತ್ತೆ. ಆದರೆ ಓದಲು ಬಾರದು.
ಪೋಲೀಸ್—(ಕಾಗದ ಪೇನ ಕೊಟ್ಟು) ಹಾಗಾದರೆ ಇದರಮೇಲೆ ನಿನ್ನ ಹೆಸರು ಬರಿ. (ಕೈದಿ ಏನೇನೋ ಗೀಚಿ ಬರೆದು ಕಾಗದ ಹಿಂದಕ್ಕೆ ಕೊಟ್ಟಮೇಲೆ.)
ಪೋಲೀಸ್—ಇದೇನಯ್ಯ ಹೀಗೆ ಸಿಕ್ಕಾ ಬಟ್ಟೆ ಗೀಚಿರುವಿ ? ಏನು ಬರೆದಿರುವೆ ಓದು ?
ಕೈದಿ—ಓದಲಿಕ್ಕೆ ಬರುವುದಿಲ್ಲವೆಂದು ಮೊದಲೇ ಹೇಳಿದೆನಲ್ಲವೆ ?

—ಜ. ಬಸವಲಿಂಗ

ಮೇಷ್ಟ್ರು—(ವಾಕ್ಯರಚನೆಗೆ) ಕಿಟ್ಟು, ಬ್ರಿಟಷರಿಗೂ ಜರ್ಮನಿಯವರಿಗೂ ನಡೆದ ಯುದ್ಧವನ್ನು ಎರಡು ವಾಕ್ಯಗಳಲ್ಲಿ ವಿವರಿಸಿ ಹೇಳು.
ಕಿಟ್ಟು–"ಅವರು ಇವರಿಗೆ ಹೊಡೆದರು, ಇವರು ಅವರಿಗೂ ಹೊಡೆದರು. ಬದುಕಿ ಉಳಿದವರು ಮನೆಗಳಿಗೆ ಹೋದರು."

—ಕೆ. ಎ. ಪೈ.

ಹಳ್ಳಿನ ಡಾಕ್ಟರು—(ಹುಡುಗನ ಒಂದು ಹಲ್ಲು ಕಿತ್ತಮೇಲೆ) ರಾಯರೇ, ಫೀಸು 25 ರೂಪಾಯಿ ಕೊಡಿರಿ.
ರಾಯರು—(ಭ್ರಮೆಯಿಂದ) ಇದೇನು ಡಾಕ್ಟರೇ, ಹಲ್ಲು ತೆಗೆದರೆ 5 ರೂಪಾಯಿ ಫೀಸು ಎಂದು ಹೇಳಿದ್ದಿರಲ್ಲ.
ಹ. ಡಾಕ್ಟರು—ನಿಮ್ಮ ಹುಡುಗ ಹಲ್ಲು ಕೀಳುವಾಗ ಕಿರುಚಿದ ಧ್ವನಿಗೆ ಕಾದಿದ್ದ ನನ್ನ 4 ಗಿರಾಕಿಗಳು ಓಡಿದರಲ್ಲ ಸ್ವಾಮಿ ? ಅದರ ನಷ್ಟ ಯಾರಿಗೆ ?

ಎಸ್. ಎಸ್. ಗುಂಡೂರು

## ಹೆಸರು ಹೇಳುವಿರಾ ?

ಮದನಮೋಹನನನ್ನು ಕಾಮನು ತ್ಯಜಿಸಿದರೆ
ಕಾಳಿದಾಸನನ್ನು ಕಾಳಿಯು ಬಿಟ್ಟುಬಿಟ್ಟರೆ
ದಿನಕರನು ದಿನವನ್ನು ಕಳೆದುಕೊಂಡರೆ
ಮದನನ ದನವು ತಪ್ಪಿಸಿ ಹೋದರೆ
ನಯನ ಚಂದನ ಕಣ್ಣನ್ನು ತೆಗೆದರೆ
ಗಾಂಗೇಯನ ಗೇಯನ್ನು ಬಿಟ್ಟರೆ
ಜಲಧಿಯ ನೀರನ್ನು ಕುಡಿದರೆ
ಪೃಥ್ವಿಯಲ್ಲಿ ಓರ್ವ ಪ್ರಸಿದ್ಧ ಪುರುಷನ ಹೆಸರಾಗುವುದು ಆ ಮಹನೀಯನಾರೆಂದು ಹೇಳುವಿರಾ.

—S. R. ಎಕ್ಕಾರು.

## ಚೌತಿಯ ಉಡಿಗೆರೆ

ಅಪ್ಪನು ಮಾಡಿದ ಚೌತಿಯ ಪ್ರತಿಮೆಗೆ
ಆನೆಯ ಸೊಂಡಿಲ ಮೊಗವಿತ್ತು ॥
ಇಲಿಯನ್ನೇರಿದ 'ಯಾರಿದು' ಎಂದೆನು
'ಈಶ್ವರ ಸುತ' ಎಂದನು ಅಪ್ಪ ॥ ೧ ॥
ಉಮಾಕುಮಾರನ ಚೆಲು ಹಬ್ಬದ ದಿನ
ಊಟಕೆ ಬಂದರು ಅತಿಥಿಗಳು ॥
ಎಲೆಗಳನಿರಿಸೀ ಅನ್ನವ ನಿಕ್ಕಲು
ಏಕಾಗ್ರತೆಯಲಿ ಜನರುಣಲು ॥ ೨ ॥
ಐದು ಬಗೆಯ ಸಿಹಿ ಭಕ್ಷಗಳಿದ್ದುವು
ಒಗ್ಗರಣೆಯ ಹುಳಿ, ಮೊಸರಿತ್ತು ॥
ಓಡುವ ತಿಳಿ ಪಾಯಸ ತಿನ್ನುತ
ಔತಣದೂಟವ ಹೊಗಳಿದರು ॥ ೩ ॥
ಅಂಮನು ತಂಬಾ ಅಡಿಕೆಲೆ ವೀಳ್ಯವ
ಅಃ ಎಂದರು ಜನಸವಿಯುತಲಿ ॥

(ಈ ಅಕ್ಷರ ಮಾಲೆಯ ಉಡುಗರೆ ಇತ್ತವರು
—ಬಿ. ರಾಮಚಂದ್ರ ಭಟ್ಟ, ಮುಂಡಾಜೆ)

## ಗಾದೆಗಳು....‘ ಮಾತು ’ (ಮುಂದುವರಿದುದು)

94. ದೊರೆಯನ್ನು ಎದುರಿಗೆ ಹೊಗಳಬೇಕು ; ಮಕ್ಕಳನ್ನು ಮರೆಯಲ್ಲಿ ಹೊಗಳಬೇಕು.
95. ಕಚ್ಚುವ ನಾಯಿ ಬೊಗಳುವುದಿಲ್ಲ, ಬೊಗಳುವ ನಾಯಿ ಕಚ್ಚುವುದಿಲ್ಲ.
96. ಊದುವ ಶಂಖ ಊದಿಬಿಟ್ಟರೆ. ಶಿವಪೂಜೆ ಆದರೇನು ? ಬಿಟ್ಟರೇನು ?
97. ಆಡಿದಂತೆ ಮಾಡಿದವ ರೂಢಿಯಲ್ಲಿ ಉತ್ತಮ, ಮಾಡದವ ಮಾದಿಗ.
98. ಕುಂಬಳಕಾಯಿ ಕಳ್ಳ ಎಂದರೆ ಹೆಗಲು ಮುಟ್ಟಿ ನೋಡಿಕೊಂಡನಂತೆ.
99. ಬಾಯಿಯಲ್ಲಿ ‘ ಬಾಮಗ ’ ಹೊಟ್ಟೆಯಲ್ಲಿ ‘ ಸೂಳೆಮಗ’
1. ಮೂಳೆ ಇಲ್ಲದ ನಾಲಿಗೆ ಹೇಗೆ ಬೇಕಾದರೂ ತಿರುಗುತ್ತೆ.
2. ಕಿವುಡ ಕಿಚಡಿ ಬೇಡಿದರೆ ಗೌಡ ಹಚಡ ಕೊಟ್ಟನಂತೆ.
3. ಕದ್ದು ಹೋಳಿಗೆ ಕೊಟ್ಟರೆ ಬೆಲ್ಲ ಕಡಿಮೆ ಎಂದನಂತೆ.
4. ಹಾಗಲಕಾಯಿಗೆ ಬೇವಿನಕಾಯಿ ಸಾಕ್ಷಿ ಹೇಳಿತಂತೆ.
5. ಹಾಲಿಗೆ ಬಂದವನಿಗೆ ಎಮ್ಮೆಯ ಕ್ರಯವೇಕೆ ?
6. ಸಮಯಕ್ಕೊಂದು ಮಾತು ಸಾವಿರಕ್ಕಾಯಿತು.
7. ನಾಲಿಗೆಗೆ ನೋವಿಲ್ಲ ; ಹರಟೆಗೆ ಹಿಡಿತವಿಲ್ಲ.
8. ಸಾವಿರ ಆಡಿದರೂ ಸಾವಿರದ ಹತ್ತಕ್ಕೆ ಕಡಿಮೆ.
9. ಗಾಯ ವಾಸಿಯಾದರೂ ಕಲೆ ಹೋಗುವುದಿಲ್ಲ.
10. ಎಡಕಿವಿಯಲ್ಲಿ ಕೇಳಿ ಬಲಕಿವಿಯಲ್ಲಿ ಬಿಟ್ಟಂತೆ.
11. ಕೇಳಲು ಇಚ್ಛೆಯಿಲ್ಲದವನೇ ದೊಡ್ಡ ಕುರುಡ.
12. ಪುಸ್ತಕದ ಬದನೇಕಾಯಿ ಹಸ್ತಕ್ಕೆ ಬಂದೀತೇ.
13. ಮಂಕು ಮಾತನಾಡಿದರೆ ಮಂಗ್ಯ ಅಂದಾರು.
14. ಬಾಳಿ ಬದುಕುವವರಿಗೇಕೆ ಹಾಳೂರು ಸುದ್ದಿ.
15. ಕೇಳುವವರಿದ್ದರೆ ಹೇಳುವವರಿಗೇನು ಕಮ್ಮಿ.
16. ನೀರು ತಣಿಸಿಕುಡಿ, ಮಾತು ಆರಿಸಿಆಡು.
17. ಉದ್ದ (ಅಬದ್ಧ) ಮಾತಿಗೆ ಗುದ್ದೇಮದ್ದು.
18. ಗಂಟೆಗೆ ಒಂದೇ ಸ್ವರ.
19. ಬರೇ ಗುಲ್ಲು, ನಿದ್ದೆ ಗೇಡು.
20. ಅತಿವಾದಕ್ಕೆ ಪ್ರತಿವಾದವಿಲ್ಲ.
21. ಮಾತಿನಲ್ಲಿ ಮನೆ ಕಟ್ಟಿದ ಹಾಗೆ.
22. ಭಾಷೆ ಆಡಿದರೂ ಶಪಥ ಹಾಕಬೇಡ.
23. ಬಾಯಿಯಿದ್ದವನ ಬದುಕು ಚಂದ.
24. ಓತಿಕ್ಯಾತನಿಗೆ ಬೇಲಿ ಸಾಕ್ಷಿಯಂತೆ.
25. ಭಾಷೆ ತಪ್ಪಿದವ ದೇಶ ತಪ್ಯಾನು.
26. ಬಾಯಿಯಿದ್ದವ ಬರದಲ್ಲೂ ಬದುಕಿದ.
27. ಬಾಯಲ್ಲಿ ಸವಿಮಾತು, ಬಗಲಲ್ಲಿ ಕತ್ತಿ.
28. ಚಾಡಿ ಮಾತಿನಿಂದ ಚಾವಡಿ ಕೆಟ್ಟಿತು.
29. ಹೊಟ್ಟೆಯುರಿಯುವ ಮಾತಿಗೆ ಸಿಟ್ಟೇಕೆ.
30. ಹೇಳುವುದು ಶಾಸ್ತ್ರ, ಹಾಕುವುದು ಗಾಳ.

## ‘ ನೀತಿ ’

1. ಎಣ್ಣೆ ಬರುವಾಗ ಕಣ್ಣು ಮುಚ್ಚಬಾರದು ; ಬೆಣ್ಣೆ ಬರುವಾಗ ಹೊರಗೆ ಹೋಗಬಾರದು.
2. ನೆಂಟರೊಳಗಣ ಸಾಲ, ಮೆಟ್ಟಿನೊಳಗಣ ಕಲ್ಲು ನಿತ್ಯ ನೋವು ಕೊಡುತ್ತದೆ.
3. ಮೆಟ್ಟು ಮೆಟ್ಟಿದವನ ಹಿಂದೆ ನಡೆಯಬಾರದು, ಕೋಲು ಹಿಡಿದವನ ಮುಂದೆ ನಡೆಯಬಾರದು.
4. ಕೋಳಿ ಇಲ್ಲದ ಊರಿನಲ್ಲಿ ಕದ್ದವ ಕೆಟ್ಟ; ನೀತಿಯಿಲ್ಲದ ಊರಿನಲ್ಲಿ ಇದ್ದವ ಕೆಟ್ಟ.
5. ಋಣದ ಕೂಳು ತಿನ್ನಬಾರದು, ಸಾಲಗಾರನ ಆಳ್ತನಕ್ಕೆ ಕೈಗೊಡಬಾರದು.
6. ಕೋಪದಲ್ಲಿ ಕೊಯ್ದುಕೊಂಡ ಮೂಗು ಶಾಂತವಾದಮೇಲೆ ಬಂದೀತೆ ?
7. ಬಡವನಿಗೆ ಆಸೆ ತೋರಿಸಬೇಡ, ಧನಿಕನಿಗೆ ಭಾಷೆ ಕೊಡಬೇಡ.
8. ಕ್ಷೇತ್ರವರಿತು ಬೀಜ ಹಾಕು ; ಪಾತ್ರವರಿತು ದಾನಮಾಡು.

9. ಕಂಕುಳಲ್ಲಿ ಕುರು ಬರಬಾರದು, ಕೋಮಟಿ ನೆರೆಯಿರಬಾರದು.
10. ದನದ ಮುಂದೆ ಹೋಗಬೇಡ; ಕುದುರೆ ಹಿಂದೆ ಬಾಗಬೇಡ.
11. ಮುಂದನ್ನು ಯೋಚಿಸದವನಿಗೆ ಮೂರು ದಾರಿಯ ಮಣ್ಣು.
12. ಕನ್ನಡಿಯೊಳಗಿನ ಗಂಟಿಗಿಂತ ಕೈಯೊಳಗಿನ ದಂಟೇ ಲೇಸು.
13. ಜನರಿಗೆ ಅಂಜಿ ನಡೆಯದಿದ್ದರೆ, ಮರ್ಯಾದೆಗೆ ಅಂಜಿ ನಡೆ.
14. ಬೆಳ್ಳಗಿರುವುದೆಲ್ಲಾ ಹಾಲಲ್ಲ; ಹೊಳೆವುದೆಲ್ಲಾ ಚಿನ್ನವಲ್ಲ.
15. ಹಾರುವನಿಗೆ ಆಳಾಗಬೇಡ, ಗಾಣಿಗನಿಗೆ ಎತ್ತಾಗಬೇಡ.
16. ದಾಸ್ಯದ ಊಟಕ್ಕಿಂತ ಸ್ವಾತಂತ್ರ್ಯದ ನೀರೇ ಲೇಸು.
17. ಕಣ್ಣಾರೆ ಕಂಡರೂ ಪರಾಮರ್ಶಿಸಿ ನೋಡು.
18. ಅಪ್ಪನ ಸಂಗಡ ಪೇಟೆ, ಅವ್ವನ ಸಂಗಡ ಊಟ.
19. ಹಣ್ಣಾಗುವ ಕಾಯಿಯನ್ನು ಹೀಚಿನಲ್ಲೇ ನೋಡು.
20. ದೇಶಾಂತರ ಹೋದರೂ ಸ್ವಾತಂತ್ರ್ಯವಿರಬೇಕು.
21. ಕಸ ತಿನ್ನುವುದಕ್ಕಿಂತ ತುಸ ತಿನ್ನುವುದು ಲೇಸು.
22. ಆಟದ ಹೊತ್ತಿಗೆ ಆಟ, ಪಾಠದ ಹೊತ್ತಿಗೆ ಪಾಠ.
23. ಊಟಕ್ಕೆ ಮೊದಲಿರು, ಸ್ನಾನಕ್ಕೆ ಹಿಂದೆ ಇರು.
24. ಚಂಚಲತೆಯೇ ವಿನಾಶ, ದೃಢತೆಯೇ ವಿಕಾಸ.
25. ಅರಸನ ಮುಂದಿರಬೇಡ, ಕತ್ತೆ ಹಿಂದಿರಬೇಡ.
26. ಹಂಗಿನರಮನೆಗಿಂತ ವಿಂಗಡದ ಗುಡಿ ಲೇಸು.
27. ಆಳ ನೋಡಿ ಹಾರು, ಗಾಳಿ ನೋಡಿ ತೂರು.
28. ತಣ್ಣೀರನ್ನಾದರೂ ತಣಿಸಿ ಕುಡಿಯಬೇಕು.
29. ಕೊಟ್ಟುಕೆಟ್ಟವರಿಲ್ಲ, ತಿರಿದು ಬಾಳಿದವರಿಲ್ಲ.
30. ಇಬ್ಬರ ಜಗಳ ಮೂರನೆಯವನಿಗೆ ಲಾಭ.
31. ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡು.
32. ನಿಧಾನವೇ ಪ್ರಧಾನ.
33. ಬಿತ್ತಿದ್ದನ್ನು ಬೆಳೆದುಕೊ.
34. ಶಕ್ತಿಗಿಂತ ಯುಕ್ತಿ ಮೇಲು.
35. ಒಬ್ಬರಿಗಿಂತ ಇಬ್ಬರು ಮೇಲು.
36. ಅಹಿಂಸೆಯೇ ಪರಮ ಧರ್ಮ.
37. ಅತಿ ಸರ್ವತ್ರ ವರ್ಜಯೇತ್.
38 ಮಳೆ ಬಂದಂತೆ ಕೊಡೆ ಹಿಡಿ.
39. ಬರೆದುದನ್ನು ಓದಿ ನೋಡು.
40. ಅಡಿ ನೋಡಿ ಮುಡಿ ಹೊರಬೇಕು.
41. ಜಗಲಿ ಹಾರಿ ಗಗನ ಹಾರಬೇಕು.
42. ಗತಿ ಕೆಟ್ಟರೂ ಮತಿ ಕೆಡಬಾರದು.
43. ಉಂಡಮನೆಗೆರಡು ಬಗೆಯಬಾರದು.
44. ಓಡಿ ಹೋದರೂ ಕೇಡು ತಪ್ಪದು.
45. ಅಡಿಕೆಕದ್ದರೂಕಳ್ಳ; ಆನೆಕದ್ದರೂಕಳ್ಳ.

## ಉತ್ತರಗಳು

### 52-ನೇ ಪುಟದ ಪ್ರಶ್ನೆಗೆ

1. ಬಿಸಿಲ್ಕುದುರೆ.
2. ಸಂದೇಶ.
3. ಭೇತಾಳ.
4. ಬೇಸರ.
5. ಕೈಮರ.
6. ನವಾಸಾಗರ.
7. ಬೈರಾಗಿ.
8. ಶಿವಮೊಗ್ಗೆ.

### ಜಾಣ್ಮೆಗೆ

ಹೆಂಗಸು ತಾಯಿ. ಹುಡುಗಿ ಮಗಳು ಹೇಗೆಂದರೆ ಹುಡುಗಿಯ ಮಾವ ಎಂದರೆ ತಾಯಿಯ ಸಹೋದರ. ಆದುದರಿಂದ ತಾಯಿಯ ಮಾವನೇ ಅವಳ ಸಹೋದರನಿಗೂ ಮಾವನೇ ಅಲ್ಲವೇ?

### ಒಗಟುಗಳಿಗೆ

1. ಬಳೆ.
2. ಹಲಸಿನ ಹಣ್ಣು.
3. ಕನ್ನಡಿ.
4. ಕೋಗಿಲೆ.
5. ಹತ್ತಿಕಾಯಿ.
6. ಕಣ್ಣು.
7. ನವಿಲು.
8. ಬೆಂಕಿ.
9. ನೆರಳು.
10. ಊಟ.

'ಹೆಸರು ಹೇಳಿ'ಗೆ ಉತ್ತರ

ಮೋಹನದಾಸ ಕರಮಚಂದ ಗಾಂಧಿ




ಈ ಚಿತ್ರದಲ್ಲಿ ಎಲ್ಲೆಲ್ಲ ಯಾವ ಬಣ್ಣಗಳನ್ನು ಹಾಕಬೇಕೋ ನೋಡಿ ಹಾಕಿರಿ. ಮುಂದಿನ ತಿಂಗಳ ಚಂದಮಾಮದಲ್ಲಿ ನಾವು ಹಾಕುವ ಅದೇ ಬಣ್ಣದ ಚಿತ್ರದೊಂದಿಗೆ ಹೋಲಿಸಿ ನೋಡಿ.

Controlling Editor: SRI CHAKRAPANI
Printed and Published by B. NAGI REDDI at the B. N. K. Press, Madras-1



Chandamama, October '50

Photo by B. Ranganadham

" ಇಲ್ರೀ! ಇನ್ನೂ ಸ್ವಲ್ಪ ಬಿಸಿಲು ಕಾಯಿಸಿದಮೇಲೆ, ಊಟ. "

